# ಎರಡು ನುಡಿ

ಈ ಪುಸ್ತಕವು ನಮ್ಮ ಗ್ರಂಥಮಾಲೆಯ ೨ನೆಯ ವರ್ಷದ ಕೊನೆಯ ಪುಷ್ಪವಾಗಿದೆ. ಕಳೆದ ಅಕ್ಷಯ್ಯತೃತೀಯೆಗೆ—ಎಂದರೆ ೧೯೩೩ ರ ಏಪ್ರಿಲ್ ಮೊದಲನೆಯ ವಾರದ ಸುಮಾರಿಗೆ—ಮಾಲೆಯ ತೃತೀಯ ವರ್ಷಾರಂಭವಾಗಿದ್ದರೂ, ಅನಿವಾರ್ಯವಾದ ಕಾರಣಗಳ ಮೂಲಕ ನಾವು ಕೊಡಬೇಕಾದ ಪುಸ್ತಕಗಳನ್ನು ಪೂರೈಸಲಾಗಲಿಲ್ಲ. ಉದಾರಹೃದಯರಾದ ವಾಚಕರು ಮನ್ನಿಸುವರೆಂದು ಕೋರಿದ್ದೇವೆ. ಬರುವ ಅಕ್ಷಯ್ಯತೃತೀಯೆಯ ಹೊತ್ತಿಗೆ ೩ನೆಯ ವರ್ಷದ ಆರೂ ಪುಸ್ತಕಗಳು ಪ್ರಕಟವಾಗುವಂತೆ ಶಕ್ತಿಮೀರಿ ಪ್ರಯತ್ನಪಡುತ್ತಿದ್ದೇವೆ. ಆ ಪ್ರಯತ್ನವು ಸಫಲವಾದೀತೆಂಬ ಭರವಸೆಯೂ ನಮಗಿದೆ. ಅದು ಸಫಲವಾದಾಗಲೆ ನಮ್ಮ ವಾಚಕವೃಂದದ ಮನ್ನಣೆಯನ್ನು ಪಡೆದಂತಾಗುವದೆಂಬುದನ್ನೂ ನಾವು ತಿಳಿಯದೆ ಇಲ್ಲ.

ಮೂರನೆಯ ವರ್ಷದ ಪ್ರಥಮ ಪುಷ್ಪವು—ಧಾರವಾಡದ ಶ್ರೀ. ಹಣಮಂತ ಪೀತಾಂಬರ ಜೋಶಿ ಬಿ. ಎ. ಅವರದೊಂದು ಸಾಮಾಜಿಕ ಸಮಸ್ಯಾತ್ಮಕವಾದ ಕಾದಂಬರಿಯು. ಈ ಬಗೆಯ ಸ್ವತಂತ್ರ ವಿಚಾರಗಳನ್ನೊಳಗೊಂಡ ಕಾದಂಬರಿಗಳು ನಮ್ಮಲ್ಲಿ ವಿರಳವೆಂದೇ ಹೇಳಬೇಕಾಗಿದೆ. ವಾಚಕರಿದನ್ನು ಎದುರು ನೋಡಬೇಕು. ಪ್ರೊ. ಗೋಕಾಕರ ಕವನಸಂಗ್ರಹ,ಮತ್ತು ಒಂದು ಕಾದಂಬರಿ ಶ್ರೀ. ಕೃಷ್ಣಕುಮಾರರ ಕಥಾಸಂಗ್ರಹ ಇವು ೩ ನೆಯ ವರ್ಷದ ಪುಸ್ತಕಗಳಲ್ಲಿ ಕೆಲವಾಗಿವೆ.

ಇಲ್ಲಿ ಒಂದು ಮಾತನ್ನೆತ್ತುವದು ಅಪ್ರಸ್ತುತವಾಗದು. ಅದು ಈ ಲಾವಣಿ ಸಂಗ್ರಹದ ಕೆಲವೊಂದು ಭಾಗಗಳಿಗೆ ಸಂಬಂಧಿಸಿದುದು. ‘ಅಶ್ಲೀಲ’ವೆಂದು ಭಾವಿಸಬಹುದಾದ ಕೆಲವು ಭಾಗಗಳನ್ನು ಇಲ್ಲಿ ಪ್ರಕಟಿಸಿದ್ದಕ್ಕೆ ಕೆಲವು ಮಂದಿ ವಾಚಕರು ಆಕ್ಷೇಪಿಸಬಹುದಾಗಿದೆ. ನಮಗೂ ಆ ಸಂದೇಹವು ಬಾರದಿರಲಿಲ್ಲ. ಸಂಪೂರ್ಣ ವಿಚಾರ ಮಾಡಿದ

ಮೇಲೆಯೇ ಅವುಗಳನ್ನು ಪ್ರಕಟಿಸುವದನ್ನು ಗೊತ್ತುಮಾಡಿದೆವು. ನಾವು ಪ್ರಕಟಿಸದೆ ಇದ್ದರೆ ಹಲವರು ಅಸಮಾಧಾನವುಳ್ಳವರಾಗುತ್ತಿದ್ದರೆಂಬುದನ್ನು ಒಲ್ಲೆವು. ಭರತೇಶವೈಭವವು ಮೊದಲು ಪ್ರಕಾಶಿತವಾದಾಗ ಅದರಲ್ಲಿನ ಉತ್ತಾನ ಶೃಂಗಾರದ ಭಾಗಗಳು ಬಿಡಲ್ಪಟ್ಟಿದ್ದುವು. ಆದರೆ ಗ್ರಾಹಕರ ಅತ್ಯಾಗ್ರಹಕ್ಕಾಗಿ ಅವುಗಳ ಪರಿಶಿಷ್ಟವೊಂದನ್ನು ಬಿಡಿಯಾಗಿ ಮುದ್ರಿಸಿ ಪ್ರಕಾಶಕರು ಸಲ್ಲಿಸಬೇಕಾಯಿತು. ಕವಿಯ ಸಮಗ್ರಕೃತಿಯನ್ನು ತಿಳಿದುಕೊಳ್ಳಬೇಕೆಂಬ ವಾಚಕರ ಆತುರತೆಗೆ ಪ್ರಕಾಶಕರು ಅಡ್ಡ ಬಂದರೆ ವಾಚಕರದನ್ನು ಸಹಿಸುವದಿಲ್ಲ. ಇದೊಂದು ಕಾರಣವಲ್ಲದೆ, ಸಂಸ್ಕೃತವೆನಿಸಿಕೊಳ್ಳುವ ಸಮಾಜದ ಸಾಹಿತ್ಯಸಂಪ್ರದಾಯಗಳನ್ನೇನೂ ಅರಿಯದೆ, ಪ್ರಕೃತಿಮಾತೆಯಿಂದ ನೇರವಾಗಿ ಸ್ಫೂರ್ತಿಪಡೆದು ಬಿಡಸುಡಿಯುವ ಲಾವಣಿಕಾರರ ಕೆಲವೊಂದು ಕೃತಿಭಾಗವನ್ನು 'ನಮ್ಮ' ದೃಷ್ಟಿಯಿಂದ ತ್ಯಾಜ್ಯವೆಂದೆಣಿಸಿ, ತೆಗೆದಿಡುವದು ಸರಿಯಲ್ಲವೆಂದೂ ಎನಿಸಿತು. ಅವರ ಕಾವ್ಯವೈಖರಿಯಲ್ಲಿ ಅದೊಂದು ಬಗೆಯ (Frankness) ಸ್ಪಷ್ಟೋಕ್ತಿಯಿದೆ. ಪ್ರಕೃತಿದೇವಿ'ಗೆ ನಾಗರಿಕತೆಯ ಉಡಿಗೆತೊಡಿಗೆಗಳಿಲ್ಲ. ಅವಳು ನಿರಾಭರಣ ನಗ್ನಸೌಂದರ್ಯಶಾಲಿನಿಯು. ಅವಳ ಸೌಂದರ್ಯವು ತಾನೆ ತಾನಾಗಿ ಬತ್ತಲೆಯಾಗಿ ನಿಂತಿದೆ. ಆ ಲಾವಣ್ಯದ ಉಪಾಸಕರು ಲಾವಣಿಕಾರರು. ಅವರಾ ಲಾವಣ್ಯವನ್ನು ಕಂಡುಂಡು, ಅನುಭವಿಸಿದಂತೆ ಆಡುವರು—ಹಾಡುವರು. ಸವನಾಗರಿಕರಾದ ನಾವು 'ಶಿಷ್ಟಾಚಾರ'ವನ್ನು ಒಂದು ಶಾಸ್ತ್ರವನ್ನಾಗಿ ಮಾಡಿಕೊಂಡು, ಅದನ್ನು ಪರಿಪೂರ್ಣಾವಸ್ಥೆಗೆ ಮುಟ್ಟಿಸಿದ್ದೇವೆ. ನಮ್ಮ ಆಹಾರವಿಹಾರಗಳೆಲ್ಲ ಆ ಶಾಸ್ತ್ರದ ಅಚ್ಚಿನಲ್ಲಿ ಎರಕ ಹೊಯ್ದುವುಗಳಾಗಿವೆ. ನಮ್ಮ ಆಚಾರಗಳ ಸಾಂಪ್ರದಾಯಿಕತೆಯು ನಮ್ಮ ವಿಚಾರಪ್ರಾಂತದ ಮೇಲೂ ಪರಿಣಾಮ ಮಾಡದೆ ಇಲ್ಲ. ಈ ಶಿಷ್ಟಾಚಾರದ ಮುಸುಕಿನಲ್ಲಿ ಎಂತಹ ಮೋಸದ ಮೊಟ್ಟೆಯನ್ನು ನಾವು ಕಟ್ಟಿಕೊಂಡಿರುತ್ತೇವೆಂಬುದನ್ನು ಪ್ರತಿಯೊಬ್ಬರು ತಮ್ಮ ತಮ್ಮ ಅನುಭವದಿಂದಲೆ ಪ್ರಮಾಣಿಸಿಕೊಳ್ಳಬೇಕು. ನಮ್ಮ ಸಭ್ಯತೆಯ ತೆರೆಯ ಹಿಂದೆ ಎಂತಹ ಅಶ್ಲೀಲತೆಯು

ಹುದುಗಿಕೊಂಡಿದೆಯೆಂಬುದಕ್ಕೆ ನಮ್ಮ ನಮ್ಮ ಮನಸ್ಸೇ ಸಾಕ್ಷಿ. ಶೃಂಗಾರವು ಜೀವನದ ಒಂದು ಅಂಗ ಮಾತ್ರ ಲಾವಣಿಕಾರರಿಗೆ.ಆದ್ದರಿಂದ ಅದು ಅವರಿಗೆ ಸ್ವಾಭಾವಿಕವಾಗಿದೆ. ಎಂತಲೆ ಅತ್ಯುಚ್ಚ ನೈತಿಕ ಆಧ್ಯಾತ್ಮಿಕ ವಿಷಯಗಳನ್ನೂ ಅವರು ಅಷ್ಟೇ ಸ್ವಾಭಾವಿಕವಾಗಿ ಕಾಣುತ್ತಿದ್ದು, ಲಾವಣಿಗಳಲ್ಲಿ ಅವುಗಳನ್ನು ಹಾಡುತ್ತಾರೆ. ಅಲ್ಲದೆ ಆಧುನಿಕರಾದ ನಾವು ಶೃಂಗಾರಿಕ ಶಬ್ದಗಳನ್ನು ಉಪಯೋಗಿಸುವದಕ್ಕೂ, ಹಳ್ಳಿಗರು ಉಪಯೋಗಿಸುವದಕ್ಕೂ ಅರ್ಥದಲ್ಲಿ ಬಹಳ ಬಿಡುತ್ತದೆ. ಈ ಸಹಜಸಂಬಂಧವನ್ನು ಓದುಗರು ಶ್ರದ್ಧೆಯಿಂದ ಲಕ್ಷ್ಯದಲ್ಲಿಟ್ಟುಕೊಂಡಲ್ಲಿ, ಈ ಸಂಗ್ರಹದಲ್ಲಿನ ಉತ್ತಾನಶೃಂಗಾರದ ವರ್ಣನೆಗಳಿಗೆ ಅವರು ಮುಗುಮ್ಮುರಿಯಲಿಕ್ಕಿಲ್ಲವೆಂದು ನಾವು ನಂಬಿದ್ದೇವೆ.

ಉತ್ತರ ಕರ್ನಾಟಕದ ಪ್ರಯೋಗಗಳ ಪರಿಚಯವಿಲ್ಲದವರ, ಮತ್ತು ಬಹಳ ಕಲಿತು ಜಾನಪದ ಪದಪ್ರಯೋಗಗಳ ಅರ್ಥವಾಗದವರ ಉಪಯೋಗಕ್ಕಾಗಿ ಕಠಿನಶಬ್ದಗಳ ಅರ್ಥಕೋಶವೊಂದನ್ನು ಕೊನೆಗೆ ಕೊಟ್ಟಿದ್ದೇವೆ.

ತಾ. ೨೩-೯-೩೩
ಧಾರವಾಡ

**ಪ್ರಕಾಶಕರು**

# ಪರಿಚಯ

ಲಾವಣಿಕಾರರಲ್ಲಿ "ಹರದಾಸ" ಮತ್ತು "ನಾಗೇಸಿ" ಎಂದು ಎರಡು ವರ್ಗಗಳುಂಟು. "ತುರಾಯಿ" ಮತ್ತು "ಕಲ್ಗಿ" ಎಂತಲೂ ಇವಕ್ಕೇ ಎನ್ನುವುದುಂಟು. ಇವೆರಡೂ ವರ್ಗದ ಲಾವಣಿಕಾರರು ಒಬ್ಬರಿಗೊಬ್ಬರು ಇದಿರುಬದಿರಾಗಿ ಹಾಡುತ್ತಿರುತ್ತಾರೆ. ಹರದಾಸರದು ಗಂಡಿನ ಪಕ್ಷ, ನಾಗೇಸಿಯವರದು ಹೆಣ್ಣಿನ ಪಕ್ಷ. ಅವರವರು ತಮ್ಮ ತಮ್ಮ ಪಕ್ಷವನ್ನು ಎತ್ತಿಹಿಡಿದು ಹಾಡುವುದುಂಟು. ಒಮ್ಮೊಮ್ಮೆ ತಮ್ಮ ಪಕ್ಷವನ್ನು ಬೆಳಸುವ ಭರದಲ್ಲಿ ಪ್ರತಿಪಕ್ಷದ ವಿಡಂಬನೆಯು ಮಿತಿಮೀರಿ ಹೋಗುತ್ತಿರುವುದೂ ಉಂಟು. ಲಾವಣಿಗಳ ಲಾವಣ್ಯಕ್ಕೆ ಎಲ್ಲಿಯಾದರೂ ಒಮ್ಮೊಮ್ಮೆ ಭಂಗ ಬರುತ್ತಿದ್ದರೆ ಅದು ಈ ಸಾಂಪ್ರದಾಯಿಕತೆಯ ಒಲೆಯಲ್ಲಿಯೇ ಸರಿ.

ನಮ್ಮ ಈ ಸಂಗ್ರಹದಲ್ಲಿ ನಾವು ಪ್ರಸಿದ್ಧರಾದ ಏಳು ಮಂದಿ ಲಾವಣಿಕಾರರ ಮಿಗಿಲಾದ ಹನ್ನೆರಡು ಲಾವಣಿಗಳನ್ನು ನಾಡಿಗರ ಇದಿರಿಗೆ ಇಟ್ಟಿದ್ದೇವೆ. ಅಲ್ಲದೆ ಎರಡು ಚಿಕ್ಕ ಉಪಲಾವಣಿಗಳುಂಟು. ಅವುಗಳನ್ನು ಇಡೀ ಸಂಗ್ರಹದ ಮೊದಲಿಗೊಂದು, ಕೊನೆಗೊಂದು ಸೇರಿಸಿದ್ದೇವೆ. ಯಾಕೆಂದರೆ, ಹಾಡುಗಾರರು ಪ್ರತಿಯೊಂದು ಲಾವಣಿಯನ್ನು ಹಾಡುವಾಗ ಮೊದಲಿಗೊಂದು ಉಪೋದ್ಘಾತ ಸ್ವರೂಪದ ಚಿಕ್ಕ ಹಾಡನ್ನೂ ಕೊನೆಗೊಂದು ಉಪಸಂಹಾರ ಸ್ವರೂಪದ ಹಾಡನ್ನೂ ಹಾಡುವ ವಾಡಿಕೆಯುಂಟು. ಮೊದಲಿಗೆ ಸೂಚನಾ ಪಲ್ಲವಿಯಂತೆ ಹೇಳುವುದಕ್ಕೆ "ಸಖಿ" ಎಂದೂ, ಕೊನೆಯದಕ್ಕೆ "ಖ್ಯಾಲಿ" ಎಂದೂ ಅವರು ಹೆಸರು ಕೊಟ್ಟಿದ್ದಾರೆ. ನಾವು ಸಂಗ್ರಹಿಸಿರುವ ಪ್ರತಿಯೊಂದು ಲಾವಣಿಗೂ ಕೊನೆ ಮೊದಲಿನ ಎರಡೆರಡು ಖ್ಯಾಲಿ–ಸಖಿಗಳನ್ನು ಕೊಡದೆ ಎಲ್ಲ ಹಾಡುಗಳಿಗೆ ಕೂಡಿ ಮೊಟ್ಟ ಮೊದಲಿಗೆ ಒಂದು ಒಳ್ಳೇ ಸಖೀ ಹಾಡನ್ನೂ ಕೊಟ್ಟುಕೊನೆಗೆ ಒಂದು ಖ್ಯಾಲಿಯನ್ನೂ ಪ್ರತ್ಯೇಕವಾಗಿ ಜೋಡಿಸಿದ್ದೇವೆ.

ಈ ಸಂಗ್ರಹದಲ್ಲಿ ಬಂದ ಲಾವಣಿಗಳೆಲ್ಲಾ ಸುಮಾರು ಇಪ್ಪತ್ತು ವರ್ಷಗಳಿಗಿಂತ ಮೊದಲಿನವು. ಇವುಗಳಿಗೆ ಜನರು ಹಳೇ ಲಾವಣಿಗಳೆಂದು ಹೇಳುವರು. ಇವುಗಳನ್ನು ರಚಿಸಿದವರಲ್ಲಿ ಇಂದಿಗೆ ಬಹುಶಃ ಸ್ವರ್ಗವಾಸಿಗಳಾದವರೇ ಹೆಚ್ಚು. ಶ್ರೀ. ಕುಬಣ್ಣನವರು ಮಾತ್ರ ಈ ಏಳ್ವರಲ್ಲಿ ಜೀವಿಸಿರುವವರಾಗಿದ್ದಾರೆ. ಶ್ರೀ. ಗೋಪಾಳ–ದುರದುಂಡಿ ಮತ್ತು ಶ್ರೀ. "ಸಾನಾಸಾಯ್ಬ" ಹಾಗೂ ಶ್ರೀ. "ನ್ಯಾಮಣ್ಣ" ಇವರ ವಿಷಯಕ್ಕೆ ನಮಗೆ ಹೆಚ್ಚಿಗೇನೂ ಗೊತ್ತಾಗಿಲ್ಲ. ಶ್ರೀ. ಖಾಜಾ ಭಾಯಿ ಮತ್ತು ಶ್ರೀ. ಸಿದ್ದೂ–ಶಿವಲಿಂಗ ಹಾಗೂ ಶ್ರೀ. ಸಂಗೂ–ರಾಯಪ್ಪ ಇವರಿಷ್ಟು ಜನರು ಮಾತ್ರ ದಿವಂಗತರಾಗಿ ಹಲವು ವರ್ಷಗಳಾದವು.

ಇದೀಗ ನಾವು ಹಳೇ ಲಾವಣಿಗಳನ್ನಷ್ಟೇ ಸ್ವೀಕರಿಸಿ ಹೊಸ ಲಾವಣಿಗಳಿಗೆ ಕೈ ಹಚ್ಚದಿರುವುದಕ್ಕೆ ಒಂದು ಕಾರಣವುಂಟು. ಅದೇನೆಂದರೆ ಮಹಾಯುದ್ಧದಿಂದೀಚೆಗಿನ ಕಾಲದ ಜನಜೀವನದಲ್ಲಿ ಹೊರ ಜಂಬ ಹೆಚ್ಚಾಗಿ ಒಳಜೊಳ್ಳುತನವು ಬೆಳೆದು ಬಂದದ್ದರಿಂದ ಜನರಲ್ಲಿದ್ದ ನವಿಗಾರಿಕೆಯೆಲ್ಲ ಲೋಪವಾಗಿ ರಸವಂತಿಕೆಯು ಮುಳುಗಿ ಹೋಗಿದೆ. ಜೀವನದಲ್ಲಿಯೇ ರಸವಿಲ್ಲದಾಗ ಅವರ ಹಾಡಿನಲ್ಲೆಲ್ಲಿಯು ರಸವು ಬರಬೇಕು ? ಈಚಿಗಿನ ಹಾಡುಗಳೆಂದರೆ ನೀರಸವಾದ ಲೆಕ್ಚರನ್ನು ಧ್ವನಿ ಕೂಡಿಸಿ ತಾಳದಲ್ಲಿ ಹೇಳಿದಂತೆ. ಕೆಲವರು ನೀತಿಯ ನಿಬಂಧಗಳನ್ನು ಪ್ರಾಸಕ್ಕೆ ಸರಿಹೊಂದಿಸಿ ನೀತಿಸಾರ ಲಾವಣಿಯೆಂದು ಹೇಳುವರು. ಇನ್ನು ಕೆಲವರು ಕೈವಲ್ಯ ಜ್ಞಾನಸಿಂಧುಗಳ ಪುಟಗಳನ್ನೇ ತಾಳ ಮೆಟ್ಟಿಗೆಗೆ ತಂದು ತತ್ವಸಾರ ಲಾವಣಿಯೆಂದು ಹೇಳುವರು. ಈಗಿನ ಕಥಾಸಾರ ಲಾವಣಿಗಳನ್ನಂತೂ ಕೇಳಲಾಸಲ್ಲ. ಕಥೆ ಗೊತ್ತಿಲ್ಲದವರಿಗೆ ಹೊಸ ಕಥೆಯೆಂದೆನಿಸಿ ಏನಾದರೂ ತುಸು ಹರುಷವಾದರೆ ಆಗಬೇಕು. ಒಟ್ಟಿನಲ್ಲಿ ಈಚೆಗೆ ಇಪ್ಪತ್ತು ವರ್ಷಗಳಲ್ಲಿ ಹೊರಟ ಹೊಸ ಲಾವಣಿಕಾರರ ಹಾಡುಗಳಲ್ಲಿ ಕಾವ್ಯದ ವಿಲಾಸವಿಲ್ಲ. ಬರೀ ಸಂಗೀತ ಮಯ ಲೆಕ್ಚರ್.

ಅಲ್ಲದೆ ಹಳೇ ಲಾವಣಿಗಳನ್ನು ಈಗಿನ ಹಳ್ಳಿಗರು ಕೇಳಲೂ

ಒಪ್ಪುವದಿಲ್ಲವೆಂದು ಹಾಡುಗಾರರೇ ಸ್ವತಃ ಹೇಳುತ್ತಾರೆ. ಇದೂ ಸರಿಯೇ. ಜನರಲ್ಲೇ ರಸವನ್ನು ಆಸ್ವಾದಿಸುವ ಶಕ್ತಿಯು ಲೋಪಿಸಿರುವಾಗ ಅವರೊಳಗಿಂದಲೇ ಹೊರಬೀಳುವ ಹಾಡುಗಾರರಲ್ಲಾದರೂ ರಸೋನ್ಮೇಷವು ಎಲ್ಲಿಂದ ಬರಬೇಕು ?

ಮನುಷ್ಯನು ನಿರಕ್ಷರನಾಗಿದ್ದರೂ ಕೂಡ ಅವನಲ್ಲಿ ಪ್ರತಿಭೆಯು ಉದಯಿಸಿದರೆ ಕಲಿತವರನ್ನೂ ಕೂಡ ನಾಚಿಸುವ ಕೃತಿಗಳು ಆತನಿಂದ ಹೊರಪಡುವವೆಂಬ ಮಾತು ನವಶಿಕ್ಷಿತರಿಗೆ ಮನವರಿಕೆಯಾಗುವುದಕ್ಕೆ ಈ ಹಳೇ ಲಾವಣಿಗಳು ಸಾಕ್ಷಿಯಾಗಿವೆ. ಆದುದರಿಂದ ಮುಂದೆ ಕವಿಕೋಟಿಗೆ ಸೇರಲೆಳಸುವವರು ಪ್ರತಿಭೆಯ ಪರಿಚಯವನ್ನು ಪಡೆದುಕೊಳ್ಳದೆ ಗತ್ಯಂತರವಿಲ್ಲವೆಂಬುದನ್ನರಿತುಕೊಳ್ಳುವುದಕ್ಕೂ ಇವು ಸಾಧನಗಳಾಗಿವೆ. ಅಲ್ಲದೆ ವಿದ್ಯಾಪರಹಿತರೂ ಕೂಡ ರಸೋನ್ಮೇಷಕ್ಕೆ ಬಂದು ಮುಟ್ಟಿರುವಾಗ ತಾವೇಕೆ ಆ ನೆಲೆಗೆ ಮುಟ್ಟಬಾರದೆಂಬ ಆಸೆಭರವಸೆಗಳು ಹೊಸಬರಲ್ಲಿ ಹೊರಚಿಮ್ಮುವುದಕ್ಕೂ ಇವು ಸಹಾಯಕಾರಿಗಳಾಗಿವೆ.

ಆಂಗ್ಲವಿದ್ಯಾವ್ಯಾಸಂಗಿಗಳಿಗೂ ಸಂಸ್ಕೃತಸಾಹಿತ್ಯಪರಿಚಿತರಿಗೂ ಹಳಗನ್ನಡದ ಹುರುಳನ್ನರಿತವರಿಗೂ ಹೇಗಾದರೂ ಉಚ್ಚಕಾವ್ಯಗಳ ದರ್ಶನವು ಆಗೇ ಆಗುತ್ತದೆ. ಆದರೆ ಬರೀ ಹೊಸಗನ್ನಡದವರಿಗೆ ಕಾವ್ಯವೆಂದರೆ ಧ್ವನಿ ತೆಗೆದು ಹೇಳುವುದೊಂದೇನೋ ಎಂಬುದಕ್ಕಿಂತ ಹೆಚ್ಚಿಗೇನೂ ಗೊತ್ತಾಗುವಂತಿರಲಿಲ್ಲ. ಅದರಲ್ಲಿ ಈ ನಾಲ್ಕೈದು ವರ್ಷಗಳಲ್ಲಿ ಮಾತ್ರ ಇಂಥವರಿಗೆ ತುಸು ತುಸು ಅಸ್ಪವು ಸಿಗಹತ್ತಿದೆ. ಈಗ ನಾವು ಜನಪದಸಾಹಿತ್ಯವನ್ನು ಸಂಗ್ರಹಿಸಿ ಇದೇ ಕಾರ್ಯಕ್ಕೆ ಕೈಲಾದಷ್ಟು ಕೈಹಚ್ಚುತ್ತಿದ್ದೇವೆ.

ಶೃಂಗಾರ ಲಾವಣಿಗಳಲ್ಲಿ ಬರುವ ಗ್ರಾಮ್ಯರೀತಿಯ ಕೆಲವು ಸಂಗತಿಗಳು ಸುಶಿಕ್ಷಿತರಿಗೆ ಅಸೌಜನ್ಯವೆಂದು ತೋರಬಹುದು. ಆದರೆ ನಾವಿಲ್ಲಿ ಹೇಳುವುದೇನೆಂದರೆ ಅಲ್ಲಲ್ಲಿ ಕಾಣುವ ಕವಿಕಲ್ಪನೆಯ ಅಗಾಧ ವೈಖರಿಯನ್ನು ತೋರಿಸಿಕೊಡುವುದಿಷ್ಟೇ ನಮ್ಮ ಉದ್ದೇಶವಿದೆ.

ಶ್ರೀ ಖಾಜಾಭಾಯಿಯವರ ಶೃಂಗಾರ ಲಾವಣಿಗಳ ಮೊದಲಿನ ಚೌಕಗಳಲ್ಲಿ ಕಾಣುವ ಅಗಾಧ ವರ್ಣನಾಚಾತುರ್ಯವನ್ನು ಹೊಗಳದಿರಲಿಕ್ಕಾದೀತೇ ? ಶ್ರೀ ಸಂಗೂ ಅವರ ಗೋಕುಲಾಷ್ಟಮಿಯ ಲಾವಣಿಯನ್ನೋದಿ ಯಾರು ಬೆರಗಾಗಲಿಕ್ಕಿಲ್ಲ ?

ಒಬ್ಬೊಬ್ಬರಲ್ಲಿ ಒಂದೊಂದು ಕೌತುಕವನ್ನು ಕಾಣಬಹುದು. ಶ್ರೀ ಕುಬಣ್ಣನವರ ಕಥೆಗಾರಿಕೆಯು ಹೊಗಳುವಂಥಾದ್ದು. ವತ್ಸಲಾಹರಣದ ಹಾಡಿನಲ್ಲಿ ಕಥಾವಸ್ತುವನ್ನು ವಿಸ್ತರಿಸಬೇಕಾದಲ್ಲಿ ವಿಸ್ತರಿಸಿ, ಸಂಕ್ಷೇಪಿಸಬೇಕಾದಲ್ಲಿ ಸಂಕ್ಷೇಪಿಸಿ ಮುಖ್ಯರಸಕ್ಕೆ ಭಂಗ ಬಾರದಂತೆ ಮಾಡಿರುವುದು ಅವರ ಔಚಿತ್ಯಗುಣಕ್ಕೆ ತಕ್ಕ ನಿದರ್ಶನವಾಗಿದೆ.

ಸಿದ್ದೂ–ಶಿವಲಿಂಗ ಅವರ ಭೀಷ್ಮಪರ್ವದ ಲಾವಣಿಯಲ್ಲಿ ಕಂಡು ಬರುವ ಭಾವಗಂಗೆಯ ಗಂಭೀರಗತಿಯನ್ನು ಎಷ್ಟೆಂದು ಹೊಗಳಿದರೂ ಸ್ವಲ್ಪವೇ ಅಲ್ಲವೇ ? ಈ ಹಾಡಿನಲ್ಲಿ ಮೊದಲಿನಿಂದ ಕೊನೆಯವರೆಗೂ ನಾವು ಏಕತಾನತೆಯಲ್ಲಿ ಓಲಾಡುವೆವು.

ಶ್ರೀ ಗೋಪಾಳ–ದುರದುಂಡಿಯವರೂ ಬಹಳ ಪ್ರಖ್ಯಾತರು. ಆದರೆ ಅವರ ಹಾಡುಗಳು ನಮಗೆ ಹೆಚ್ಚಿಗೆ ಸಿಕ್ಕಿಲ್ಲ. ಆದರೂ ಅವರ ಸಮಾಜವಿಡಂಬನೆಯ ತೀಕ್ಷ್ಣ ಟೀಕೆಯನ್ನು 'ಅಮ್ಮೂರ ಮಾತಿದು' ಎಂಬ ಹಾಡಿನಲ್ಲಿ ದಿಗ್ದರ್ಶನದ ಮಟ್ಟಿಗಾದರೂ ಕಾಣುವೆವೆಂಬುದರಲ್ಲಿ ಸಂದೇಹವಿಲ್ಲ.

ಶ್ರೀ ನಾನಾ ಅವರೂ ನ್ಯಾಮಣ್ಣಾ ಅವರೂ ಇದಿರು ಬದಿರು ತೋಡಿಗೆ ತೋಡಿ ಹಾಡಿದ ಹಾಡುಗಳು ಬಹಳ ಚಮತ್ಕಾರದವು. "ಬಸರಿದ್ದೇನೆ" ಎಂಬ ಹಾಡಿನಲ್ಲಿ ನಾನಾ ಅವರು ಮುಂದೆ ನಡೆಯಬೇಕಾದ ಸಂಗತಿಗಳನ್ನು ಇಂದೇ ಅಭಿಲಕ್ಷಿಸಿ ನಗೆಗೀಡಾಗುವುದನ್ನು ಚಿತ್ರಿಸಿರುವಂತೆಯೇ, ನ್ಯಾಮಣ್ಣಾ ಅವರು "ನಾಗರಪಂಚಮಿ" ಯ ಹಾಡಿನಲ್ಲಿ ಇನ್ನೊಂದು ವಿಧದಿಂದ ಆಶಾಪರ್ಯವಸಾಯಿಯಾಗುವಂತೆ ಮಾಡಿದ್ದಾರೆ.

IX

ಕೊನೆಗೆ ದಿವಂಗತರಾದ ಶ್ರೀ ಖಾಜಾಭಾಯಿಯವರ "ಕರೀ ಹುಡಿಗಿ" ಹಾಡಿನ ಬಗೆಗೆ ಒಂದು ಮಾತನ್ನು ಹೇಳುವುದು ಅವಶ್ಯವಾಗಿದೆ. ಗಂಡು ಹೆಣ್ಣಿನ ಹೆಚ್ಚು ಕಡಿಮೆಯ ವಾದದ ಹಾಡುಗಳಲ್ಲಿ ಇದು ಒಳ್ಳೇ ಚಿತ್ರವಿಚಿತ್ರಗಳಿಂದ ತುಂಬಿದುದಾಗಿದೆ.

ಇನ್ನೇನು ? ಲಾವಣೀಕವಿಗಳು ಶೃಂಗಾರಪದಗಳನ್ನೇ ಅತಿಶಯವಾಗಿ ಬಳಸುತ್ತಿದ್ದರೂ ಅವರ ಜೀವನವು ಕೇವಲ ದೇಹಾತ್ಮಬುದ್ಧಿಯ ಕೊಳೆಯಲ್ಲೇ ಹೊರಳಾಡಿ ಹಾಳಾಗಲಾರದೆಂಬ ಅಂಶವನ್ನು "ಪ್ರಾರ್ಥನೆ" ಮತ್ತು "ನಿನ್ನ ಹೊರತು ದೇವರೇ ಇಲ್ಲ" ಎಂಬ ಕಿರಿಹಾಡುಗಳಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳುವೆವು. ಲಾವಣೀಕವಿಗಳ ಜೀವನವು ವಿವಿಧ ರಸಗಳಲ್ಲಿ ವಿಸ್ತಾರಹೊಂದುತ್ತ ಕೊನೆಕೊನೆಗೆ ಶಾಂತಿರಸದ ನಿರನಾಡಿಗೆ ಬಂದು ಸೇರದೆ ಹೋಗುವಂತಿಲ್ಲವೆಂಬುದನ್ನು ನಾವು ಬಹಳ ಕಡೆಗೆ ಕಂಡಿದ್ದೇವೆ. ಕೈಗೆ ಸಿಕ್ಕ ವೇದಾಂತ ಪುಸ್ತಕಗಳನ್ನೋದಿ ಬೈರಾಗಿಯಾದವರಿಗಿಂತ ವಿವಿಧ ರಸಪೋಷಣೆಗಳಲ್ಲಿ ಬೆಳೆದ ಲಾವಣೀಕವಿಗಳ ವೃದ್ಧಾಪ್ಯ ಜೀವನವು ಬಹಳೇ ಪ್ರಶಾಂತರಮಣೀಯವಾಗಿರುತ್ತಿರುವುದುಂಟು. ಅದಕ್ಕೆಂತಲೇ ನಾವು ಈ ಸಂಗ್ರಹಕ್ಕೆ "ಜೀವನಸಂಗೀತ"ವೆಂದು ಹೆಸರನ್ನಿಟ್ಟಿದ್ದೇವೆ. ವಿವಿಧ ಸ್ವರಗಳನ್ನು ಉಚಿತವಾಗಿ ಬಳಸಿಕೊಂಡರೆ ಅದು ಸಂಗೀತ; ವಿವಿಧ ರಸಗಳನ್ನು ಉಚಿತವಾಗಿ ಉಪಯೋಗಿಸಿಕೊಂಡರೆ ಅದು ಜೀವನ. ಅಂತೇ ಇದು ಜೀವನ ಸಂಗೀತ. ಶ್ರೀಕೃಷ್ಣ ಭಗವಂತನು ಇಂಥ ಜೀವನ ಸಂಗೀತದ ಆದಿಗುರುವು. ಅವನ ಲೀಲೆಯ ಪ್ರಥಮಭಾಗವು ಶೃಂಗಾರಮಯ; ಕೊನೆಯದು ವೀರ ಅಧ್ಯಾತ್ಮ. ಅಂತೇ ಆ ಮುರಲೀಧರನು ಜೀವನಸಂಗೀತದ ಆದಿ ಪ್ರವರ್ತಕನು. ಆ ರಾಧಾಕೃಷ್ಣರ ಪ್ರತಿನಿಧಿಗಳೇ ನಮ್ಮ ಲಾವಣೀಕಾರರ ನರ-ನಾರಿಯರು. ಜೀವನದ ಪೂರ್ವರಂಗದ ರಥಿ-ಸಾರಥಿಯರಿವರು. ಇವರ ಓಂಕಾರ ಬೀಜವೇ ಶೃಂಗಾರರಸವು. ಆದುದರಿಂದ ಶೃಂಗಾರವೆಂದ ಕೂಡಲೆ ಹಾರಿ ನಿಲ್ಲುವ ಮಡಿವಂತಿಕೆಯೂ ಹೆಸರು ಕೇಳಿದೊಡನೆ

ಎಸರೊಸರುವ ಜೊಲ್ಲೆತನವೂ ನಮ್ಮ ದೃಷ್ಟಿಯಿಂದ ತ್ಯಾಜ್ಯವೆಂದೇ ನಾವು ಒತ್ತಿ ಆಡಿಪಡುವೆವು.

ಈ ಲಾವಣೀಸಂಗ್ರಹವನ್ನು ನಮಗೆ ಒದಗಿಸಿ ಕೊಟ್ಟವರೆಂದರೆ ಆ ಹಾಡುಗಳನ್ನು ನಮಗೆ ಹೇಳಿ ಕೊಟ್ಟವರೇ ಸರಿ. ಇಲ್ಲದಿದ್ದರೆ ಈ "ಜೀವನ ಸಂಗೀತ"ವು ನಾಡಿನ ಸಾಹಿತಿಗಳಿಗೆ ಅಪರಿಚಿತವಾಗಿಯೆ ಉಳಿದು ಬಿಡುತ್ತಿತ್ತು. ಶ್ರೀ. ಕುಬಣ್ಣನವರ ಮಕ್ಕಳಾದ ಶ್ರೀ. ವೀರಭದ್ರಪ್ಪನವರೇ ಸ್ವತಃ ಚಡಚಣಕ್ಕೆ ಬಂದಾಗ ತಮ್ಮ ತಂದೆಯವರ ಕೆಲವು ಹಾಡುಗಳನ್ನು ನಮ್ಮ ಗೆಳೆಯರಿಗೆ ಬರೆದು ಕೊಟ್ಟು ಉಪಕಾರ ಮಾಡಿರುವರು. ಹಲಸಂಗಿಯ ದಿವಗಂತ ಖಾಜಾಭಾಯಿಯವರ ಹಾಗೂ ಅವರ ವಸ್ತಾದರಾದ ದಿ॥ ಸಂಗೂ-ರಾಯಪ್ಪ ಅವರ ಹಾಡುಗಳನ್ನು ಇಲ್ಲಿಯ ರಾ॥ ಓಲೆಕಾರ ರಾಮಚಂದ್ರಪ್ಪ ಎಂಬವರು ಹೇಳಿ ಕೊಟ್ಟಿರುವರು. ಅಲ್ಲದೆ ಇಲ್ಲಿಯ ದಿ॥ ಸಿದ್ಧೂ-ಶಿವಲಿಂಗ ಅವರ ಹಾಡುಗಳನ್ನು ಇನ್ನು ಕೆಲವರು ಹೇಳಿದರು. ಇವರೆಲ್ಲರಿಗೆ ಹಾಗೂ ಮೂಲಕವಿಗಳಿಗೆ ನಾವು ಕೃತಜ್ಞರಾಗಿದ್ದೇವೆ.

ಇನ್ನೊಂದು ಮಾತೇನೆಂದರೆ ಶ್ರೀ ಕುಬಣ್ಣನವರ ಮುಮ್ಮಕ್ಕಳೊಬ್ಬರು ಒಳ್ಳೇ ಸಾಹಸದಿಂದ ತಮ್ಮ ಮುತ್ತಯ್ಯನವರ ಹಾಡುಗಳನ್ನೆಲ್ಲ ಬರೆದು ಸಂಗ್ರಹಿಸಿ ಇಟ್ಟಿದ್ದಾರೆಂದು ಕೇಳಿದ್ದೇವೆ. ನಾಡಿನ ರಸಿಕರು ಯಾರಾದರೂ ಆ ಸಂಗ್ರಹವನ್ನು ದೊರಕಿಸಿ ಪ್ರಸಿದ್ಧಪಡಿಸಿದರೆ ನಾಡಿಗೆ ಬಹಳೇ ಭೂಷಣವಾಗುವದೆಂದು ನಿವೇದಿಸುವೆವು.

ಹಲಸಂಗಿ<br>೧೧-೭-೩೩ } **ಸಂಗ್ರಾಹಕರು**

# ಕವಿ

ಜಗದೊಳ್ ಸನ್ನಿದವಾದ **ನಾಳ್ನುಡಿಗಳಂ**
ಛಂದಕ್ಕೆ ಬರ್ಪಂತು ನೆ—
ಟ್ಟಗೆ ಮಾತಾಡುವ ಬಲ್ಮೆ, ಚಿತ್ರದೊಳ್
ಒರಲ್ದಿರ್ದರ್ಥಮಂ ಕೂಡೆ ನಾ—
ಲಗೆಯಿಂ ರಂಜಿಸುವೊಂದು ಬಿನ್ನಣಂ
ಆದಿನ್ನಾವಂಗೆ ಪುಣ್ಯೈಕ ಭಾ—
ಗಿಗೆ ಸ್ವೈಪಿಂ ದೊರೆಕೊಳ್ಗುಮಾತನೆ ವಲಂ
**ಶೃಂಗಾರ ರತ್ನಾಕರಂ ||**

—ಕವಿಕಾಮ

# ಪ್ರಾರ್ಥನೆ

ಗುರುವೆ ನಿಮ್ಮ ಪಾದಕ ಬೆರಸಿ ।
ಪೂಜೆ ಮಾಡುವೆ ಸಾಹಿತ ತರಸಿ ।
ತೀರ್ಥ ಸೀತಾಳದಿಂದ ಪಾದ ತೊಳಸಿ ।
ಅಜಿರ ಕಸ್ತೂರಿ ಅಂಗಕ ಧರಿಸಿ ।
ಜಾಜಿ ಪುಷ್ಪ ಮಲ್ಲಿಗಿ ಏರಸಿ ॥

ಹರುಷದಿಂದ ಲೋಬಾನ ಸುಡಸಿ ।
ವಾದ್ಯ ವಾಲಗ ಸಂಬಾಳ ಬಾರಸಿ ।
ಕಾಯಿಕಪ್ಪುರ ನೈವೇದ್ಯ ತೋರಸಿ ।
ಶಿರಬಾಗಿ ನಿಂತ ನಾ ಕೈ ಜೋಡಸಿ ।
ಎನ್ನ ಮ್ಯಾಗ ಆಗಿರಿ ಖುಷಿ ॥

ಮಂಗಳಾರತಿ ಬೆಳಗುವೆ ಹರುಷಿ ।
ಗುರುವೆ ನಿಮ್ಮ ನಾಮವ ಸ್ಮರಿಸಿ ।
ಬಾಜಿ ಬಜಂತರಿ ಕಾಳಿ ಹಿಡಿಸಿ ।
ರುದ್ರವೀಣಾ ತಂಬೂರಿ ಮಿಡಿಸಿ ।
ಮದಲಿ ಗತ್ತ ಗಾಯನ ನುಡಿಸಿ ॥

ಭುವನದೊಳಗ ಬಂದೆನು ಜನಿಸಿ ।
ಹರಿಯ ದಾಸ ಸೇವಕ ಅನಿಸಿ ।
ನಿಮ್ಮ ಪಾದ ಮ್ಯಾಲ ನನ್ನ ಆಶಿ ।
ನಿಜಾ ತೋರಿಸೊ ಗುರು ಪರಿಹರಿಸಿ ।
**ಖಾಜಾ** ವರವ ಬೇಡಿದಾ ಒಲಸೀ ॥
ಗುರುವೆ ನಿಮ್ಮ ಪಾದಕ ಬೆರಸಿ ।
ಪೂಜೆ ಮಾಡುವೆ ಸಾಹಿತ ತರಿಸಿ ॥

---

# ಅಸಲ ಜಾತ ಹೆಣ್ಣು

೧ ನೆಯ ಚೌಕ—

ಹೆಣ್ಣಸಲ ಜಾತ ಪದ್ಮಿನಿ
ಸುರತ ಚಂದ್ರಿಣಿ
ಹೊಂಟಿ ನಾಗೀಣಿ । ನೋಡ ತಿರುಗಿ ।
ಮರಿಗುದರಿ ಕುಣಿಸಿದಂಗ ನಾಜೂಕ ನಿನ್ನ ನಡಿಗಿ ।
ಹೊಳಿಸೀರ ಥೆರಿಯು ಹೊಡಿದಂಗ ಒದುತೆ ನಿಲಗಿ ।
ತ್ರಿಲೋಕ ತಿರುಗಿ ಒಂದೆ ಹಾಡಿ
ಇಲ್ಲ ನಿನ್ನ ಜೋಡಿ
ರಂಬ ನಿನ್ನ ನೋಡಿ । ನಾಚ್ಯಾಳ ಕಡಿಗಿ ॥
ಗರಗರಾ ತಿರಪತೇ ಕಣ್ಣಾ
ಕೆಂಪ ಮೈ ಬಣ್ಣಾ
ಬೇತಲ ಸಣ್ಣಾ । ಕತ್ತಿ ಧಾರಿ ।
ನಿನ್ನ ಕಂಡ ಪಕ್ಷಿಗಳು ನಿಂತು ಹೌಹಾರಿ ।
ನಿನ್ನ ನಡಿಗಿ ನೋಡಿ ನವಲ ಕುಣಿವುದ ಮರೆತಿತರಿ ।
ನಿನ್ನ ಶಬ್ದ ಕೇಳಿ ಆಯ್ತು ಲುಬ್ಧ
ಕೋಗಿಲ ನಾಚಿ ಕದ್ದ
ವನಾ ಬಿಟ್ಟು ಎದ್ದ । ಹೋಯ್ತು ಹಾರಿ ॥
ನಿನ್ನ ಕಂಡು ಬಂತ ಭವಳೀಕಿ
ಕಪದಂಗಾಯ್ತು ಚಿಕ್ಕಿ
ಪಾರಿವಾಳದ್ಹಕ್ಕಿ । ಕೇಳ್ಯಾವ ಒದರಿ ।
ಆದಿನಿಷ್ಣುನರ್ಧಾಂಗಿ ಅಲ್ಲ ಇಕಿಯು ಸರಿ ।
ಇಕೀ ನಡಾ ನೋಡಿ ಸಿಂಹ ನಾಚಿ ತಿರವಿತ ಮಾರಿ ।
ಏನು ತಪ್ಪಿ ಹುಟ್ಟಿದೆ ತರುಣಿ
ಬತ್ತಿಸ ಲಕ್ಷಣಿ
ಮಾತ ಕೇಳಿ ಗಿಣಿ । ನಾಚಿ ಬೆದರಿ ॥

ನಿನ್ನ ಮೂಗ ನೋಡಿ ಚವಣಕ್ಕಿ ।
ನಾಚಿ ಜೀವಧಾಕಿ । ಇಲ್ಲ ಇಂಥಕ್ಕಿ ।
ಎಷ್ಟು ಇಕೀ ಝೋಕಾ ॥
ಹಾಲಕ್ಕಿ ನೋಡಿ ಆಯಿತ ಗಪ್ಪ ।
ಏನು ಇಕೀ ರೂಪ । ಹಚ್ಚಿದ್ಹಂಗ ದೀಪ ।
ಚಂದ್ರನ ಬೆಳಕಾ ॥
ತಿದ್ದಿ ತೀಡಿ ಗೊಂಬಿ ಹಾಂಗ ಮಾಡಿ ।
ರಂಬಿ ನಿನ್ನ ತಾಡಿ । ಗರುಡಪಕ್ಷಿ ನೋಡಿ ।
ನಾಚಿ ತನ್ನ ಜೀವಕ ॥
ಭಲ್ಲಲಾ ಪಕ್ಷಿ ಹೋದು ಬೆರತ
ಹಾರಿತ ನನ ಸುರತ
ಬಾರ ನೀ ಅರತ । ನಮ್ಮ ಮನಿಗಿ ।
ನಾ ಬಿಟ್ಟಿನಿ ಅನ್ನನೀರ ನಿನ್ನ ಕಾಲಾಗ ನೊರಗಿ ।
ಹೊಳಿನೀರ ಥೆರಿಯು ಹೊಡದ್ಹಾಂಗ ಒದುತ ನಿಲಗಿ ।
ತ್ರೀಸಲೋಕ ತಿರುಗಿ ಬಂದ ಹಾಡಿ
ಇಲ್ಲ ನಿನ್ನ ಜೋಡಿ
ರಂಬಿ ನಿನ್ನ ನೋಡಿ । ನಾಚ್ಯಾಳ ಕಡೀಗಿ ॥

೨ ನೆಯ ಚೌಕ—

ಮಹಾಚತುರ ಕಾಣಸ್ತಿರಿ ಚದುರ
ಎಲ್ಲಿ ಇಟ್ಟಿ ಖಬರ
ಬಂದು ನನ್ನ ಇದರ । ಕೇಳುದ್ಯಾಕ ।
ನಾ ಪಾತರದಾಕಿ ಅಲ್ಲ ಹಾದರ ಮಾಡುದಕ ।
ನನ್ನ ಒಗತನ ಹರನೀರಿ ನಿಮ್ಮ ಸಲಗಿ ಸಾಕ ।
ಒಣ ಒಡಿವಾರ ಮಾತ ನಿಮಗ ಸಲುವಿ
ನಾ ಯಾವ ದೊಡ್ಡ ಚಲುವಿ
ರಂಬಿ ನನ್ನ ನಿಲುವಿ । ನಾಚ್ಯಾಳ್ಯಾಕ ॥

ಸುಟ್ಟ ಹಂಚಿಸಂಗ ಹೆಂಗಸ
ಹುಟ್ಟಿದರ ನಾಸ
ಆಗುದು ಖಾಸ । ಸಾವು ತನಕ ।
ಯಾತಕ ಬಾರದ್ಹಾಂಗ ಮಾಡಿಸಂತಿರಿ ಮನಕ ।
ನಾ ಮಾರಿ ಎತ್ತಿ ಹ್ಯಾಂಗ ತೋರಿಸಲೆವ್ವ ಜನಕ ।
ನನ್ನ ಅಬರು ಹೋದೀತ ಕೈಮೀರಿ
ಬಿಡಿರಿ ನನ್ನ ದಾರಿ
ಬೆಂಕಿ ಹಚ್ಚರಿ । ಹಾದರ ಮಾತುಪಕ ॥

ಗಂಡಜಾತಿ ಬೈಲ ಭಂಗಾರ
ನಿಮಗ ಏನು ಘೋರ
ಕೇಳುವವರ್‍ಯಾರ । ತಾಳಿರಿ ಬೆಳಕ ।
ಬೇಕಾದ್ದು ಮಾಡಿದರ ನಿಮಗ ಏನು ಧೋಕ ।
ಈ ಹೆಣ್ಣ ಜನ್ಮ ಶಿವ ಹುಟ್ಟಿಸಿದಾನ ಯಾಕ ।
ಪತಿವ್ರತಾ ಹೋದೀತು ನಂದು ಕರಗಿ
ಗಂಡನ ಸುರಗಿ
ಬರಲಾರದಂಗ ತಿರಗಿ । ಜೋಗ ಒಳಕ ॥

ನಾ ಆದೇನು ಒಗತನಗೇಡಿ ।
ಜನದಾಗ ಖೋಡಿ । ಹಾದರ ಮಾಡಿ ।
ಹರಲಿ ತಲಿ ಮ್ಯಾಲ ॥
ಅಹಲ್ಯಾಂದು ಕೇಳಿಲ್ಲೇನು ಕತಿ ।
ಏನು ಆಯ್ತು ಗತಿ । ಗೌತಮಾಕಿ ಪತಿ ।
ಶಾಪ ಕೊಟ್ಟರಾಗಿ ಬಿದ್ದಳ ಕಲ್ಲಾ ॥

ಸೀತಾಗ ರಾವಣ ಒಯ್ದ ಇರ್ಷ ।
ರಾಮ ಆಕಿ ಪುರುಷ । ಗೆದ್ದು ತಂದ ಅರಸ ।
ಹೊಡದು ಅವನ ಶಿರಸ ।
ಸೀತಾಗ ಹೊಡಿ ಅಂತ ಹುಕುಮ ಕೊಟ್ಟ ಖುಲ್ಲಾ ॥

ಲಕ್ಷ್ಮಣಗ ಹುಕುಮು ರಾಮು ಕೊಟ್ಟ
ಸೀತಾನ ತಗೊಂಡ ಹೊಂಟ
ಅರ್ಣ್ಯಾಣದಾಗ ಬಿಟ್ಟ । ಬಂದ ತಿರುಗಿ ।
ಸೀತಾಗ ವನವಾಸ ಸುಖಾ ಇಲ್ಲ ಘಳಿಗಿ ।
ಹೊಳಿ ನೀರ ಥೆರಿಯು ಹೊಡದ್ಹಾಂಗ ಒದುತೆ ನಿಲಗಿ ।
ತ್ರಿಲೋಕ ತಿರುಗಿ ಬಂದ ಹಾಡಿ
ಇಲ್ಲ ನಿನ್ನ ಜೋಡಿ
ರಂಬಿ ನಿನ್ನ ನೋಡಿ । ನಾಚ್ಯಾಳ ಕಡಿಗಿ ॥

೩ ನೆಯ ಚೌಕ—

ಗಂಡ ಜಾತಿ ಯಾತರದ ಹೆಚ್ಚ
ಮಳ್ಳ ಆದ ಮುಂಚ
ಭಿಲ್ಲಣಿಗಿ ಹುಚ್ಚ । ಆದ ನೋಡಿ ।
ಸಾಕ್ಷಾತ ಜಗದ್ಗುರು ಸಾಂಬ ತಿಳಿಯುಗೇಡಿ ।
ಹೆಂಗಸ ಮಾಯಿ, ಗಂಡಸ ಹುಚ್ಚ ಖೋಡಿ ।
ಇಬ್ಬರದು ಮಹತ್ವ ಆದ ಸವನ
ಸಿಂಪಗ್ಯಾನ ಸೆವಸ
ಹಾದರಕ ಕವಸ । ಸಾಂಬ ಮಾಡಿ ।
ನಿನ್ನ ಮಾತ ಅನುವದಿಲ್ಲ ಸುಳ್ಳ
ರತ್ನದ ಹಳ್ಳ
ಆದ ನಾ ಮಳ್ಳ । ನಿನಗ ನೋಡಿ ।
ಈ ಹೆಣ್ಣ ಗಂಡ ಶಿವ ಹುಟ್ಟಿಸಿದಾನ ಜೋಡಿ ।
ಇರವಿ ಎಂಬತ್ತ ಕೋಟಿ ಜೀವರಾಸಿ ಮೊದಲಮಾಡಿ ।
ಹೆಚ್ಚ ಕರ್ಮ ಮಾಡಿಲ್ಲ ಗುರುರಾಯು
ತತ್ವದ ಕಾಯು ।
ಮನ್ಮಥಕ ಮಾಯು । ಪ್ರೀತಿ ಕೂಡಿ ॥
ತಗದ್ಹೋಳ ಬ್ಯಾಡ ಒಣ ಕುಸಲ
ಜಾತಿಲಿದ್ದ ಮುಸಲ

ಶಾಸ್ತ್ರದ ಶಿಕಲ । ಹೇಳ್ತ ಝಾಡಿ ।
ಎಷ್ಟಂತ ದೃಷ್ಟಾಂತ ಕೇಳಲಿ ಖೋಡಿ ।
ಪಾಂಡವರಿಗಿ ದ್ರೌಪದಿ ಪತಿವ್ರತಾ ಅನಸ್ಯಾಡಿ ।
ಐದು ಮಂದಿ ಪುರುಷರನು ಜಿಟ್ಟ
ದ್ರೌಪದಿ ಮಾಡಿ ಕಪಟ
ಕರ್ಣನಲಿ ಇಟ್ಟ । ಮನಸ ಮಾಡಿ ॥
ಎಲ್ಲಾ್ಯದ ನಿನ್ನ ಸುಟ್ಟ ಹಂಚ ।
ಹೇಳಿತಿದಿ ಮುಂಚ । ಪತಿವ್ರತಾ ಆಂಚ ।
ಯಾವಕಿ ಹುಳ ಗರತೀ ॥
ಕಲಿ ಒರುವಾಗ ಏರಿತ ಕಲ್ಲಾ ।
ಗುಡ್ಡದ ಮ್ಯಾಲ । ಕುಂಡಿಲೇ ಹುಲ್ಲ ।
ಮೇಯುತಿತ್ತ ಕತ್ತಿ ॥
ಉಪರಾಟಿ ಕಲಿಯು ಕಾಲ ।
ಉಳಿಯಲಿಲ್ಲ ಶೀಲ । ಗರತಿಗಿಲ್ಲ ಮೋಲ ।
ಹಾದರಗಿತ್ತಿ ಆಗಿ ಕುಂತಿದಾಳ ಗರತಿ ॥
ಕಲಿ ಇದ್ದಾಂಗ ಮಾಡೂನ ರೀತಿ
ತಿಸಸಬೇಡ ಗೊತ್ತಿ
ಬಿಟ್ಟು ಬಿಡ ಭೀತಿ । ತೊಳದು ಮನಸೀಗಿ ।
ಶಿವ ಜೋಡಿ ನೋಡಿ ಗಂಟ ಹಾಕ್ಯಾನ ಇಬ್ಬರಿಗಿ ।
ಹೊಳಿಸೀರ ಧೆರಿಯು ಹೊಡಿದ್ದಾಂಗ ಒದುತೆ ಸಿಲಗಿ ।
ತ್ರಿಲೋಕ ತಿರುಗಿ ಬಂದ ಹಾಡಿ
ಇಲ್ಲ ನಿನ್ನ ಜೋಡಿ
ರಂಬಿ ನಿನ್ನನೋಡಿ । ನಾಚ್ಯಾಳ ಕಡಿಗಿ ॥

೪ನೆಯ ಚೌಕ—

ಕೇಳಿ ಮಾಯು ಬಂತ ಮನ ಕರಗಿ
ಹೇಳತಾಳ ತಿರಗಿ
ಇಬ್ಬರದು ವಾರಿಗಿ । ಒಂದೆ ಜುಶ್ತಾ ।

ನಮುನಿಮುದು ಪಣಾ ಇಂದ ಕೂಡಿ ಒಂತು ವರತಾ।
ನಮ್ಮ ಮನಿಗಿ ಬಂದ್ರ ಬೋಬಾಟ ಆಗುದು ತುರ್ತ।
ನಿಮ್ಮ ಮನಿಗಿ ಬರತ ನಡಿ ಚದರ
ಹಿಡಿದ ನಿಮ್ಮ ಪದರ
ಹುಣ್ಣಿವಿ ಚಂದರ। ನಿಮ್ಮ ಸುರತ॥
ಝೂಡಿ ಜಮುಖಾನಿ ಜಾಜೂಮು ಹಾಸಿ
ಕುಂತಿದಾರ ಬೇಸಿ
ಯಾತರದ ಆಶಿ ನಿಮ್ಮ ಹೊರತ।
ದ್ರವ್ಯದ ಕೊಡಾ ಇಂದ ಸಿಕ್ಕಾಂಗ ದೌಲತ್ತಾ।
ಕೈಲಾಸದಿಂಡ ಶಿವ ಇಳದ್ಹಾಂಗ ಈ ಹೊತ್ತಾ।
ಬತ್ತೀಸ ಕಾಮುನಾಟಕ್ಹಚ್ಚಿ
ಮನ್ಮಥ ಹೆಚ್ಚಿ
ಮಾಯಕ ಮೆಚ್ಚಿ। ನಿಮುಗೆ ಬೆರತ॥
ಕಮುಲಾಕ್ಷಿ ಕಾಮಿನಿ ಅಸ್ತೂರಿ
ಉಲ್ಲಾಸ ಮಾಡಿ ಸೂರಿ
ಕಲ್ಗಿಯುವರ ಪೋರಿ। ಹಾಳ ಪತಿವ್ರತಾ।
ತುರಾಯ್ದುವರ ಹುಡುಗನ ಕೂಡಿದಾಳ ಮುರತ।
ಒಣ ಇರ್ಷದಿಂಡ ವಾದ್ಹಾಕಿ ಆಯ್ತು ವ್ಯರ್ಥ।
ಪತಿವ್ರತಾ ಹೋಯ್ತು ಮಣ್ಣೂಡಿ
ಆಗಿ ಕುಂತಿ ಖೋಡಿ
ನಿನಗ ಏನು ಧಾಡಿ। ಮಾನ ಹೋಯ್ತು॥
ಆಕಿ ಗಂಡಗ ಹತ್ತಿತ ಸುದ್ದಿ।
ಕಳೆದೆ ರಂಡಿ ಬುದ್ದಿ। ಹಾಕಿದಾನ ಗುದ್ದಿ।
ಹೋಗ ಹಳಿನಾಯಿ॥
ಸೆರಗ ಹರಿದ ಹೇಳ್ಯಾನ ಎಲ್ಲರಿಗಿ।
ತವರ ಮನೀಗಿ। ಬೀಬಿ ಇಂಗಳಗಿ।

ಅಲ್ಲಿ ಇಕಿ ತಾಯಿ ॥
ಗಂಡಸಿಂದೆ ಇತ್ತ ಸನಗ ಮಾನ ।
ಹೊಯ್ತು ಮುತ್ತೈತನ । ಆಗಿ ಕುತ್ತ ಊನ ।
ಆದ ಕಿಸಬಾಯಿ ॥
ಕರನಾಟಕ ಹಲಸಂಗಿ ಊರ
ಮೆರಿಯುತಾವ ತೂರ
ಮುಲಿಕ ಪ್ಯೈತರ । ಹಚ್ಚಿವರಿಗಿ ।
**ಖಾಜಾ**ಸ ಕವೀಸವಿ ಸಕ್ಕರಿ ಎಲ್ಲರಿಗಿ ।
ಖಂಡೂನ ಸೂರ ಕೇಳಿ ಕಲ್ಲಮುನಸ ಕರಗಿ ।
ಹೊಳಿ ನೀರ ಥೆರೀ ಹೊಡೆದಂಗ ಒದುತೆ ನಿಲಗಿ ॥
ತ್ರಿಲೋಕ ತಿರುಗಿ ಬಂದ ಹಾಡಿ
ಇಲ್ಲ ನಿಸ್ನ ಜೋಡಿ
ರಂಬಿ ನಿಸ್ನ ಸೋಡಿ । ನಾಚ್ಯಾಳ ಕಡಿಗಿ ॥

---

# ಸಂಪಿಗಿ ತೆನಿಯಂಥ ಹುಡುಗ

೧ ನೆಯ ಚೌಕ:—

ಸಂಪಿಗಿ ತೆನಿಯಂಥ ಹುಡುಗ
ಸಂತ್ಯಾಗ್ಹಾಯ್ದು ಹೋಗ್ತಾನ
ಹಂತೀಲ್ಹೋಗಿ ಕೇಳತೀನ ಹೆಸರs ।
ನನ್ನ ಕಾಂತನ ರೂಪ ಹೊಂಟಂಗ ಹುಣ್ವಿ ಚಂದರs ।
ಇವನ ಚಿಂತಿಯೊಳಗ ಜೀವಕಿಲ್ಲ ಸ್ಥಿರಾರ ।
ಕನಸೀನಾಗ ಕಂಡಂಗಾಯ್ತು
ಮನಸೀನಂದು ಹೋಗವೊಲ್ದ
ಹಲಸಂಗಿ ಊರಾಗಿಲ್ಲ ಇವನ್ಹಂತವರ ॥
ಇಂದ್ರಲೋಕದ ಪುರುಷಾ ಇವ
ಅರಸನ ಹೊಟ್ಟಿಲೆ ಹುಟ್ಯಾನೇನ
ಸರಸ ಕಾಮುನಾಟಕ್ಹಾನ ದುರುsಳ ।
ಇವನ ತೋಳ ತೊಡಿ ಖ್ಯಾದಿಗಿಹೊಡಿ ಸರsಳ ।
ನನ್ನ ಜೋಡಿ ಹಾನ ನೋಡಿ ಆದೆ ಮರsಳ ।
ಇವನ ರೂಪ ಅಪರೂಪ
ಹಚ್ಚಿದಾಂಗ ಚಂದ್ರದೀಪ
ಏನು ತಿಳಪ ಹೊಟ್ಯಾಗಿನ ಕರsಳ
ಕುಂತ್ರ ನಿಂತ್ರ ಇವನ ಧ್ಯಾನ
ಜೀವಕಿಲ್ಲ ಸಮಾಧಾನ
ನಿದ್ದಿ ಇಲ್ಲ ಕಣ್ಣಿಗಿ ಹಗಲಿರsಳ
ಇವನ ಹಸ್ತ ಏನ ಸಿಸ್ತ ಮಾವಿನ ತರsಳ ।
ಮ್ಯಾಲ ಕುಂದಲದ ಹರಳ ಉಂಗರೊಪ್ಪು ಬೆರsಳ ।
ಮನಸ ಸೋತ, ನನ್ನಗೂಡ
ಮಾತ ಒಂದೂ ಆಡವೊಲ್ಲ
ಪ್ರೀತಿಯಿಟ್ಟು ನನ್ನ ಮ್ಯಾಲ ಸರsಳ ॥

ಇವ ಹುರಪಿನವ ನಲ್ಲ ಇವನಧುರಪ ಏನ್ಹೇಳಲಿ–
ನಾಗಸರ್ಪ ಭೋರಾಡಿದಾಂಗ ನೋಡಿ ನಾ ಬೆರsತ ।
ಇವನ ಚಿಂತಿಯೊಳಗ ಮನಿಮಾರ ಮರsತ ॥
ಹಲ್ಲ ಗಲ್ಲ ಏನ ತಿಳಪ
ಕುಂಕುಮ ಕನ್ನಡಿಯಂತ ಹೊಳಪ
ಸೂರ್ಯಸಂಗ ಅವ್ವಾ ಇವನ ಸುರsತ ।
ಜೀವ ತಾಳಲಾರ್ದೆ ಕೂತೀಸವ್ವ ಬ್ಯಾಸsತ್ತ ॥
ಚಕ್ಕರಗಣ್ಣ ಕೊಕ್ಕರಮೀಸಿ
ನಕ್ಕರ ಚಂದ ಸನ್ನ ಮುಂದ
ತೊಟ್ಟ ಅಂಗಿ ಹೊತ್ತ ಶಾಲಿ ಜರತಾರ ।
ಇವ ಹತ್ತು ಮಂದ್ಯಾಗ ಮುತ್ತಿನಂಥ ಸರದಾರ।
ಇವನ ಚಿಂತಿಯೊಳಗ ಜೀವಕಿಲ್ಲ ಸ್ಥಿರಾರ ।
ಕನಸಿನಾಗ ಕಂಡಂಗಾಯ್ತು
ಮನಸಿನಂದು ಹೋಗವೊಲ್ದ
ಹಲಸಂಗಿ ಊರಾಗಿಲ್ಲ ಇವನಂಥವರ ॥

೨ನೆಯ ಚೌಕ:—

ಕೇಳ ಬಾಲಿ ಹೊಯಮಲ್ಲಿ
ಮನಸ ಯಾಕ ನನ್ನ ಮ್ಯಾಲಿ
ಸಾಕ ಮಾಡ ಯಾಕ ಹೇಳ್ತಿ ಒಡಿವಾರ ।
ಪ್ರತಿಪುರುಷರ ಮ್ಯಾಲ ಯಾಕ ನಿನ್ನ ನಜsರ
ಮನಿಗಂಡನ ಬಿಟ್ಟು ತಿರುಗೂ ರಂಡಿ ಮುಂಡದಾರ ।
ಕಂಡವರಿಗ್ಹೋಗಂವಲ್ಲ ನಾನ್ಷ
ನಿನಗಿಲ್ಲ ಅಭಿಮಾನ
ಯಾಕ ನಿಂತಿ ಹೇಳ ನನ್ನ ಇದsರ ॥
ಪಾರ್ವತಿ ಸರಸ್ವತಿ
ಭಾಳ ಪ್ರೀತಿ ಅವರ ಮ್ಯಾಲಿ

ಬ್ರಹ್ಮ ಕಳಕೊಂಡಾನ ತನ್ನ ಮಂತರಾ।
ಪಂಚಮುಖ ಆದ ತೊಟ್ಟು ಹಂಕಾರ।
ಒಂದು ತಲಿ ಕೊಯ್ದು ಬಿಟ್ಟಿದಾನ ಶಂಕರಾ!
ಲೋಕದಲ್ಲಿ ಪೂಜಿ ಮಾಡಿ
ರೂಪ ಯಾರೂ ಕೇಳೂದಿಲ್ಲ
ಶಾಪ ಹತ್ತಿ ಆದ ಅಂವಾ ಧಿಕ್ಕಾರ॥
ಪರಸ್ತ್ರೀಯರ ಸಂಗ ಮಾಡಿ
ಸೂಳೀಮಗಾ ಯಾಂವ ಈಗ
ದ್ರವ್ಯ ಗಳಿಸಿ ಆಗಿದಾನ ಸಾವಕಾರ।
ಅಗ್ನಿದಿಕ್ಕಿನಲ್ಲಿ ಲಂಕಾ ಇತ್ತ ಬಂಗಾರ।
ಪುಂಡ ರಾಮರ ದಂಡ ಕೆಂಡ ಬಡಿದು ಸುಟ್ಟಾರ।
ಹೆಣ್ಣಿನ ಕಾಲಾಗ ಭಾಳ ಮಂದಿ
ಮಣ್ಣಾs ಮುಕ್ಕಿ ಸತ್ತಿದಾರ
ಯುದ್ಧ ಕಂಡು ಬಂದಾರ ದೇವದೈತ್ಯರ॥
ಈ ಮತಿಮಂದ ಸತಿಯು ಸ್ನೇಹ–
ಎಂದಿಗಾದರೂ ಮಾಡಬಾರದು–
ಮುಕ್ತಿದಾರಿ ಕೆಡಸುದು ತನ್ನ ಯುಕ್ತೀಲಿ।
ಇಷ್ಟು ಖೊಟ್ಟಿಗುಣ ಆದ ಇದರ ಹಂತೀಲಿ॥
ಕಾಮವಿಷಯಕಾಗಿ ಇಂದ್ರ
ಗೌತಮಋಷೀ ಮನಿಗ್ಹೋಗಿ
ಕೋಳಿ ಆಗಿ ಕೂಗಿದಾನ ಕಪಟೀಲಿ।
ಅವರ ಶಾಪ ಹತ್ತಿ ಖಲಿ ಹತ್ತಿ ಕಪ್ಪೀಲಿ॥
ಇಷ್ಟು ನನಗ ತಿಳಿಲಿಕಾಗಿ
ಸ್ಪಷ್ಟ ನಿನಗ ಬರೂದಿಲ್ಲ
ಗಟ್ಟಿ ಹೇಳತೇನ ಕೇಳ ಸುಂದರಾ।
ಸಂಗವೊಲ್ಲ ದುಷ್ಟ ಚಾಲ ಖೊಟ್ಟಿ ಹೆಂಗಸರ।

ಇವನ ಚಿಂತಿಯೊಳಗ ಜೀವಾಕಿಲ್ಲ ಸ್ಥಿರಾರ ।
ಕನಸಿನಾಗ ಕಂಡಾಂಗಾಯ್ತು
ಮನಸೀನಂದು ಹೋಗವೊಲ್ದ
ಹಲಸಂಗಿ ಊರಾಗಿಲ್ಲ ಇವನಂಥವರ ॥

೩ನೆಯ ಚೌಕ:—

ಯಾಕೊ ನಲ್ಲ ನಿನ್ನ ಮ್ಯಾಲ
ನನ್ನ ಖ್ಯಾಲ ರಾತ್ರಿ ಹಗಲ
ಎಂಥ ಬುದ್ಧಿ ಖೊಟ್ಟಿ ನಿಂದು ಕಡಿತನಕ ।
ನೀನು ಸುಳ್ಳಂದ್ರ ಕೇಳೊ ಪುರಾಣಪುಸ್ತಕ ।
ಇಂದ್ರನ ಭೆಟ್ಟೀಗಿ ಅರ್ಜುನ ಹೋದ ಸಹಜಕ ।
ರಂಬಾ ಕುಂತು ಅವನ ಮ್ಯಾಗ
ಮನಸ ಮಾಡಿದಾಳ ಹ್ಯಾಂಗ-
ನಲ್ಲೀನಂದ್ರ ಶಾಪ ಕೊಟ್ಟಾಳ್ಯಾತಕ ॥
ಶಾಪ ಹತ್ತಿ ಅರ್ಜುನಗ
ನಪುಂಸಕ ಆದನಾಗ
ವಿರಾಟರಾಯನ ಮನಿಯಾಗ ಬೇಲಾನಕ್ಕ ।
ಅಂವಾ ಹೆಂಗಸರ ಸಾಲೀ ಬರಿಸಿದಾ ಆ ಕಾಲಕ ।
ತಿರುಗಿ ಗಂಡರೂಪ ಒಂತ ಅವನ ಜನ್ಮಕ
ಆದಿಶಕ್ತಿ ಅರ್ಧಾಂಗಿ ಶೋಕಿ
ದಾರಿಗಾದರು ಬಿಟ್ಟಿಲ್ಲಾಕೀ
ತಿಳಿದು ನೋಡಿ ಮುಂದ ನಡಿ ಮ್ಯಾಲಕ ॥
ನಾ ಭಕ್ತಿ ಇಟ್ಟು ಕರಿತೇನು
ನಗತ ಮಾಡೊ ನನ್ನ ಸಂಗ-
ಒಲ್ಲೆನೆನ್ನುವ ಶಬ್ದ ಯಾಕ ಬಾಯೀಲಿ ।
ನೀ ಗಂಡಸರೆ ಹೌದಲ್ಲೊ ಏನನ್ನಿ ॥
ಇವನ ಚಿಂತಿಯೊಳಗ ಚೈನಿಲ್ಲಿ-

ಭ್ರಾಂತಿಗೆಟ್ಟ್ಕ ತಿರಗತೀನಿ–
ಏನು ಕೊಟ್ರು ಬಂದಾ ನನ್ನ ಹಂತೀಲಿ।
ಎಂದ ತೆಕ್ಕಿಮುಕ್ಕಿ ಹೊಡದು ಮಲಗೇನ ಪ್ರೀತಿಲಿ ॥
ಆಲಪರೆದು ಚಾಲಪರೆದು
ಕಾಲಬಿದ್ದು ಕರೀತೀನಿ
ಕರುಣಾ ಇಲ್ಲ ಏಳೊ ತುಸು ದರಕಾರ।
ನನ್ನ ಪ್ರಾಣ ಕೂಟ್ಟ್ಕ ಕಾಣಸೇನು ಸರಕಾರ।
ಇವನ ಚಿಂತಿಯೊಳು ಜೀವಕಿಲ್ಲ ಸ್ಥಿರಾರ।
ಕನಸೀನಾಗ ಕಂಡಾಂಗಾಯ್ತು–
ಮನಸಿನಂದು ಹೋಗವೊಲ್ದ
ಹಲಸಂಗಿ ಊರಾಗಿಲ್ಲ ಇವನಂಥವರ

೪ನೆಯ ಚೌಕ:—

ಕಾಂತೀ ಮಾತ ಕೇಳಿ ಗೆಣ್ಯಾ
ಹಿಂದ ನೋಡತಾನ ಎಂಥಾ
ವ್ಯಾಳೇ ತಂದಿ ಸ್ವಾಮಿ ಶಿವ ಶಂಕರ
ಈ ರಂಡಿ ಅಬ್ರುದ ಮ್ಯಾಲ ನಿಂತಾಳ ನಿರ್ಧಾರ।
ಇದಕ ನೆವನ ಮಾಡಬೇಕ ಒಂದು ಫಿತೂರ!
ಮನಿಯಾಗ ನಿನ್ನ ಅತ್ತೀಮಾವ
ಅಂಜತಾದ ನನ್ನ ಜೀವ
ಧರ್ಮಸಾಲೀಗ್ಹೋಗೂನು ನಡಿ ಪರಭಾರ॥
ಹೊತ್ತು ಮುಳುಗಿದ ಬಳಿಕ ಯಾರೀಗಿ
ಗೊತ್ತು ಇಲ್ಲದಂಗ ನಾ ಮುಂದ ಹೋಗಿ
ಕುಂಡರತೀನಿ ನೀ ಬಾರ ಬಿನ್ ಫೋರ್।
ನೀ ಆರ ತಾಸ ರಾತ್ರೀಗಿ ಬಾರ ಸುಂದರಾ।
ಬೆಚ್ಚ್ಕಬೆಳಗಾನ ಮಾಡೂನಂತ ಗರ್ದಿ ಜುಮ್ಮ್ಕರ।
ಘಂಟ ಹೇಳಿ ಹೊಂಟ ಹೋದಾ
ಗೆಣ್ಯಾ ತಮ್ಮ ಮನೀಕಡಿ

ತಿಳೀಲಿಲ್ಲ ಮುಂದಿಂದಿಕೀಗಿ ಹೊಡಾರ ॥
ಹತ್ತು ಮಂದಿ ದಾರಿಕಾರು
ದಾರಿ ಹಿಡಿದು ಹೋಗುವಾಗ
ಕತ್ತಲಾಯ್ತು ಅವರೀಗಿ ಅಂಧಾರ ।
ಅವರು ಊರ ನೋಡಿ ವಸ್ತಿ ಅಲ್ಲಿ ಇಳದಾರ ।
ಅವರು ಊಟಾ ಮಾಡಿ ಧರ್ಮಸಾಲ್ಯಾಗ ಮಲಗ್ಯಾರ ।
ಅತ್ತಿ ಮಾವ ಗಂಡಗುಣಿಸಿ
ಎಲ್ಲಾರೀಗಿ ಮಲಗಿಸಿ
ಆರತಾಸ ರಾತ್ರಿಗಿ ಹೊಂಟಾಳ ಅವಸರ ॥
ಅವಸರದಿಂದ ಅಡಾಪಿ ಮಾಡಿ
ತನ್ನ ಗೆಣ್ಯಾ ಹಾನ ಅಂತ
ಎಬ್ಬಸೂತಸ ಇದ್ದ ಅಂವಾ ಹಾದಿಕಾರ ।
ಅವನ ಬಾಯೀ ಕೇಳಿ ಎದ್ದು ಕುಂತ್ರು ಎಲ್ಲಾರ ।
ಅವರು ಎತ್ತಿ ಒಯ್ದರು ಬೆಳಗಾನ ತಮ್ಮ ಊರ ॥

*          *          *          *

ಗೆಣ್ಯಾ ಆಶೀ ಹಚ್ಚಿ ಫಾಸೀ ಮಾಡಿ
ಫಾಸಿ ಆಯ್ತು ಸನ್ನ ಜೀವ
ಕೂತು ಅಳತಾಳ ಖೋಡಿ ಅದೃಷ್ಟಾ ।
ಆಕೀ ಗಂಡಗ ಸುದ್ದಿ ಹತ್ತಿ ಕೇಳ್ಯಾನ ಕಿವಿಮುಟ್ಟ ॥
ಹಲಸಂಗಿ ಊರಾ ಮೋಜಿನ ಶಾರಾ
ದಾದೇ ಪೀರನ ಮತಿ ಪೂರಾ
ಸಂಗು ವಸ್ತಾದ ರಾಯಪ್ಪನ ಹೆಸರ್
ಖಾಜಾ ಲಾವಣಿ ಮಾಡಿದಾನ ಇಲ್ಲ ಕಸರ್ ।
ಇವನ ಚಿಂತಿಯೊಳಗ ಜೀವಕಿಲ್ಲ ಸ್ಥಿರಾರ ।
ಕನಸಿನಾಗ ಕಂಡಾಂಗಾಯ್ತು
ಮನಸಿನಂದು ಹೋಗವೊಲ್ದ
ಹಲಸಂಗಿ ಊರಾಗಿಲ್ಲ ಇವನಂಥವರ ॥



# ವತ್ಸಲಾಹರಣ

ಗನೆಯ ಚೌಕ:—

ಪಾಂಡವರಿಗಿ ಕೊಟ್ಟೆಣ್ಣ ಬಳಿರಾಮ ನಿಶ್ಚಯ ಮಾಡಿದಾನ ಕೌರವಗ।
ತಾ ಕೊಟ್ಟ ದುರ್ಯೋಧನನ ಮಗಗ।
ಭಾಳ ಪ್ರೀತಿ ಕೃಷ್ಣ ಪಾಂಡವರ ಮ್ಯಾಗ।
ಆಡಿದ ಮಾತಿಗಿ ತಿರುಗಿ ಹೂಡಿದರ-
ಸಿಟ್ಟು ಬಂತು ಆ ಗಿರಿಧರಗ।
ಮುಂದ ವತ್ಸಲಾಹರಣ ಹೇಳುವೆನೀಗ ॥ಪಲ್ಲ॥
ಪ್ರಥಮದಲ್ಲಿ ಸುಭದ್ರ ತವರ ಮನಿಘೋದಾಗ ಬಳಿರಾಮನ್ಹೇಣತಿ।
ಬಸುರಿದ್ದಳಾಗ ಆ ರೇವತಿ।
ಸುಭದ್ರ ಕೇಳ್ಯಾಳ ಅಣ್ಣನ ಹಂತಿ।
ಹೆಣ್ಣು ಹುಟ್ಟಿದರ ಭೀಮನ್ಯಾಗ ಕುಡುವುದು-
ನಿಶ್ಚಯ ಮಾಡಿ ಬಿಟ್ಟಾಳ ಪೂರ್ತಿ।
ಮುಂದ ಹೆಣ್ಣು ಹುಟ್ಟಿತು ಆಕಿಯಂತೈತಿ ॥
ನಿಶ್ಚೈ ಮಾಡ್ಯಾರ ಬಳಿಭದ್ರನ ಮಗಳನ್ನ ಅಭಿಮನ್ಯಾಗ ಕೊಟ್ರು
ವಚನ ಹೋಗೆಯ್ತಿ।
ಭಾಳ ಹರುಷವಾದ ಕೃಷ್ಣಮೂರುತಿ।
ಮುಂದ ಪಾಂಡವರು ವನವಾಸಕ್ಹೋಗುದೈತಿ।
ವಿದುರನ ಮನೆಯಲೆ ಇಟ್ಟು ಸುಭದ್ರನ್ನ-
ಹೊಂಟುಹೋದರು ಬಿಟ್ಟು ಹಸ್ತಿನಾವತಿ।
ಭೂಮಿಸೀಮಿ ಕಳಕೊಂಡು ಆಗಿ ಫಜೀತಿ॥
ಇತ್ತ ಕೌರವನ ಮಗಗ ಹೆಣ್ಣು ಬೇಕಾಗಿ ಶಕುನಿ ತೆಗೆದಾನ ಯುಕ್ತಿ।
ಬಳಿರಾಮನ ಕೇಳಿದಾ ಬಂದು ಮಾಡಿ ಮಮತಿ।
ನಿನ್ನ ಮಗಳನು ಕುಡು ಆಗಲಕ್ಕರತಿ।
ಬೇಕಾದ್ದು ಉಂಡಾಳು ಉಟ್ಟಾಳು ತೊಟ್ಟಾಳು-
ಚೂರ ಮಾಡಬೇಡ ನೀ ಚಿಂತಿ।

ಕುಡು ವಚನ ಇದಕ ಹೇಳು ಏನಂತಿ ॥
ಇಷ್ಟು ಮಾತ ಕೇಳಿ ಕೃಷ್ಣಂತಾನ ಶಕುನಿಗಿ–
ಬಳಿರಾಮನ ಮಗಳನ್ನಾ ।
ಅಭಿಮನ್ಯಗೆ ಕೊಟ್ಟೈತಿ ವಚನಾ ॥
ಕೊಟ್ಟಂಥ ಹೆಣ್ಣ ಮತ್ತ ತಿರುಗಿ ನಿಮಗೆ ನಾನು
ಕೊಡಬೇಕು ಹ್ಯಾಂಗ ಹೇಳಿನ್ನಾ ।
ಜನದೊಳಗ ಹೋದಿತೊ ನಮ್ಮ ಮಾನಾ ॥
ಇದರ ಮ್ಯಾಲ ಬಳಿರಾಮನ ಖುಷಿ ಬಂದ್ಹಾಂಗ ಮಾಡಲಿ–
ಇಲ್ಲ ನನ್ನ ಸ್ವಾಧೀನಾ ।
ಇದರೊಳಗ ಹೋಗುದಿಲ್ಲ ನಾನಾ ॥
ಕೃಷ್ಣನ ಮಾತಿಗಿ ಬಳಿರಾಮು ।
ಸಿಟ್ಟಿಗೆದ್ದು ಅಂತಾನ ಕೇಳೊ ಶ್ಯಾಮು ॥
ನಾ ವಚನ ಕೊಟ್ಟಿಲ್ಲೋ ಸತ್ಯಧರ್ಮಾ ।
ನಕಲಿ ಆಡಿದ ಮಾತೇನೊ ಕಾಯಿಮಾ ॥
ತಂಗಿ ಭಿಡೆಕ ಮಾಡಿನಿ ಸುಳ್ಳೆ ಪ್ರೇಮಾ ।
ನನ್ನ ಮನಸು ಇದ್ದಿಲ್ಲ ಕುಡು ನೇಮಾ ॥
ಕೃಷ್ಣನ ಮಾತ ಮೀರಿ ಕೊಟ್ಟ ಬಳಿರಾಮು ಕೌರವೇಂದ್ರನ ಮಗ
ಲಕ್ಷ್ಮಣಗ ।
ಭಾಳ ಪ್ರೀತಿ ಬಂದು ತನ್ನ ಮನದಾಗ ।
ಮದಿವಿ ಮಾಡಿಕೊ ಅಂದ ಶಕುನೀ ಮಾವಾಗ ।
ಆಡಿದ ಮಾತಿಗಿ ತಿರುಗಿ ಹೂಡಿದರ–
ಸಿಟ್ಟು ಬಂತು ಆ ಗಿರಿಧರಗ ।
ಮುಂದ ವತ್ಸಲಾಹರಣ ಹೇಳುವೆನೀಗ ॥

೨ ನೆಯ ಚೌಕ—

ಕೇಳಿ ಬಳಿರಾಮನ ಮಾತಿಗಿ ಶಕುನಿ ಬಂದು ಹೇಳಿ ದುರ್ಯೋಧನಗ ।
ಬಳಿರಾಮು ಹೆಣ್ಣ ಕೊಟ್ಟಾನೊ ನಿಮಗ
ನಿಶ್ಚ ಮಾಡಿ ಬಂದೆ ನಾ ಲಕ್ಷ್ಮಣಗ ।

ನಾಳ ಉಪಮುಕ ಹೊಂಡರಿ ಲಗ್ನ ಕ-
 ತಡಾ ಮಾಡಬೇಡರಿ ಬೇಗ ।
 ತೀರಿ ಹೋಗಲಿ ಕಾರ್ಯ ತೀವರವಾಗೇ ॥

ಕೇಳಿ ದುರ್ಯೋಧನ ತಯಾರ ನಡಿಸಿದಾ ಚತುರಂಗ ಬಲವೆಲ್ಲ
ಸಹಿತಾಗಿ ।
 ಆನಿ ಕುದರಿ ದಂಡ ಮಾರ್ಬಲ ಸಾಗಿ ।
 ದಾರಿ ಹಿಡದಾರ ಆರ್ತಿಲಿ ದ್ವಾರಕಿಗಿ ।
ಅಗಣಿತ ಬ್ರಾಹ್ಮರು ಬ್ರಹ್ಮರುಸಿಗಳು-
 ಮಹಾರಥಿಕರು ಭೂಷಣವಾಗಿ ।
 ಹೀಂಗೆ ನಡೆದವರ್ದ್ಯಗಡಣದ ಒಳಗೆ ॥

ಇತ್ತ ದ್ವಾರಕಿಯಲಿ ಬಳಿರಾಮ ಲಗ್ನಪತ್ರ ಬರೆದಾ ಬೀಗ
ಬಾಂಧವರೀಗಿ ।
 ಮತ್ತ ದೂತನ ಕಳ್ಸಿದಾ ಹಸ್ತಿನಾವತಿಗಿ ।
 ಸುಭದ್ರ ಇದ್ಕು ವಿದುರನ ಬಳಿಗಿ ।
ಬರುವ ದೂತನ ದಾರಿಯೊಳಗ ಸುಭದ್ರಾ-
 ಅರಳಿ ಮರದ ಪ್ರದಕ್ಷಿಣಿಗಿ ।
 ತಾ ಬಂದಾಗ ಕಂಡಳಾ ದೂತನಿಗೆ ॥

ನಿಂತು ಸುಭದ್ರ ಅಂತಾಳ ಯಾಕೊ ದೂತಾ- ।
 ಏನು ಕಾರಣ ಬಂದಿ ಇಲ್ಲಿಗಿ ।
 ಏನು ಸುದ್ದಿ ತವರಮನಿ ಕಡಿಗಿ ॥
ಆ ದೂತ ಹೇಳ್ಯಾನ ಬಳಿರಾಮನ ಮಗಳನ್ನ-
 ದುರ್ಯೋಧನನ ಮಗನಿಗಿ ।
 ನಿನ್ನೆ ಕೊಟ್ರು ಲಗ್ನ ನಾಳಿಗಿ ॥
ವತ್ಸಲಾನ ಮದುವಿಗಿ ವಿದುರಗ ಬಾಯೆಂದು-
 ಹೇಳಿ ಹೋಗತಿನಿ ತಿರುಗಿ ।
 ನಾ ಬಂದಿನಿ ಇದರ ಸಲುವಾಗಿ ॥

ಕೇಳಿ ಸುಭದ್ರಾ ಬಿದ್ದಾಳ ಧರಣಿಗಿ ।
ನೀರು ತಂದು ಅಳತ್ತಾಳ ಕಣ್ಣಿಗಿ ॥
ತವರ ಮುನಿ ಇಲ್ಲದ್ಹಾಂಗ ಇಂದಿಗಿ ।
ಆಗಿ ಹೋಯ್ತು ನನ್ನ ಪಾಲಿಗಿ ॥
ನನ್ನ ಮಗಗ ಇಟ್ಟ ಹೆಣ್ಣ ಬೇಕಾಗಿ ।
ಬಳಿರಾಮು ಕೊಟ್ಟ ಅವರಿಗಿ ॥
ಕೃಷ್ಣ ಬುದ್ಧಿ ಹೇಳಲಿಲ್ಲೇನಣ್ಣಾಗ ಕರುಣವಿಲ್ಲದೆ ಕೊಟ್ಟಾರ ಅವಗ ।
ನನಗಾತು ಮುಗಿಲ ಹರ್ದು ಬಿದ್ಹಾಂಗ ।
ಕಿಚ್ಚ ಸುರುವಿತು ಸುಭದ್ರಾನ ಹೊಟ್ಯಾಗ ।
ಆಡಿದ ಮಾತಿಗೆ ತಿರುಗಿ ಹೂಡಿದರ–
ಸಿಟ್ಟು ಬಂತು ಆ ಗಿರಿಧರಗ ।
ಮುಂದ ವತ್ಸಲಾಹರಣ ಹೇಳುವೆನೀಗ ॥

೩ನೆಯ ಚೌಕ:—

ತವರಮುನಿಯು ಆಶಿಯಿಂದ ನನ್ನ ಪತಿ ಅರ್ಜುನನ ನಾ ಮರತೇನೊ
ನಮ್ಮಣ್ಣಗೊಳದಿಂದ ಧೈರ್ಯ ಹಿಡದೇನೊ ।
ನನ್ನ ನೋಡ್ತಾರ ಅಂತ ಭಾಳ ನಂಬಿದೆನೊ ।
ಅಯ್ಯಯ್ಯೊ ದೇವಾ ಮುನಿದ್ಯಾ ಇಂದಿಗೆ–
ಅಂಥಾದ್ದೇನು ಅವರಿಗಿ ಮಾಡಿದೆನೊ ।
ಇಂದೀಗಿ ಕೊಯ್ದಾರ ನನ್ನ ಕೊರಳವನು ॥
ಆಸರಿಲ್ಲದೆ ನಾ ಇರಲಾರೆನು ಅಯ್ಯಯ್ಯೊ ಉರಲ ಹಾಕಿ
ಕೊಳ್ಳಲೇನೋ ।
ನಮ್ಮ ಅಣ್ಣಗೊಳ ಮುಂದ ಪ್ರಾಣ ಬಿಡಲೇನೋ ।
ಮಾರಿ ತೋರದೆ ಭೂಮಿಯು ಬಗದ್ಹೋಗಲೇನೋ ।
ಎದ್ದೆದ್ದು ಬೀಳತಾಳ ಪದ್ಮಗಂಧಿ ಹದ್ದ–
ಹಾವ ಕಚ್ಚಿದ್ಹಾಂಗ ಅಭಿಮನ್ಯನ್ನು ।
ತೆಕ್ಕ್ಯಾದು ಮಾಡತಾಳ ದುಃಖವನು ॥

ಮಗನೇ ನಿನ್ನ ದೈವ ಏನಾತಂತ ಮರಮರಗಿ ಬಡಕೊತಾಳ
ಎದೆಯನ್ನಾ ।
ಈಗ ಹೋಗ್ಯಾರ ಪಾಂಡವರು ವನವಾಸವನಾ।
ಅವರಿದ್ದರ ಬಿಡತಿದ್ದಿಲ್ಲ ಹೆಣ್ಣನ್ನಾ ।
ಯಾರಿಗ್ಹೇಳಲಿ ಏನು ಮಾಡಲಿ ಅಯ್ಯೋ–
ಇಲ್ಲದ್ಹಾಂಗ ಆಗ್ಯೆತಿ ನನಗ ದಿಕ್ಕವನಾ।
ಕಿತ್ತಿದ್ಹಾಂಗ ಹಾರ್ಯಾಡೂ ಹಕ್ಕಿ ಪಕ್ಕವನಾ॥
ನೆಲಕುರಳ್ಯಾಡತಾಳ ಬಲು ಹೊರಳ್ಯಾಡತಾಳ–
ತಳಮಳಸಿ ತಾಳದ ಸಂಕಟಾ।
ಖಬರಿಲ್ಲ ಆಕಿಗಿ ಎಳ್ಳಷ್ಟಾ॥
ಮಾತಾಡಸ್ತಾನ ಗಾಳಿ ಬೀಸ್ತಾನ ಕೈ ಹಿಡ–
ದೆಬ್ಬಿಸ್ತಾನ ಮಾಡಿ ಕೂಗ್ಯಾಟ।
ಅಭಿಮನ್ಯು ನೋಡಿದಾ ಕಣ್ಮುಟ್ಟ॥
ತಾಯಿೂ ಖಬರ್ಹಾರಿ ಹೋದಂಗಾಯ್ತೊ ಜೀವ।
ಅಭಿಮನ್ಯು ಅಳ್ತಾನ ಸಣ್ಣಾವ॥
ನಡುಹೊಳ್ಯಾಗ ಮುಣಗಿದ್ಹಾಂಗ ನಾವ!
ನಮಗಾತು ಮುನಿದಾ ಇಂದ ಶಿವಾ॥
ಮತ್ತ ಭೌಳಿ ತಿಳಿದೆದ್ದು ಸುಭದ್ರ ಎದಿಗುದ್ದಿಕೊಂಡಾಳ ಕಲ್ಲ ಕೈಯಾಗ!
ಆಗ ಧೈರ್ಯ ಬಂತು ಅಭಿಮಾನ್ಯಾಗ।
ತಾಯಿಾ ಕೈಯ ಹಿಡಿದಾ ಆ ಕ್ಷಣದಾಗ।
ಆಡಿದ ಮಾತಿಗಿ ತಿರುಗಿ ಹೂಡಿದರ–
ಸಿಟ್ಟು ಬಂತು ಆ ಗಿರಿಧರಗ।
ಮುಂದ ವತ್ಸಲಾಹರಣ ಹೇಳುವೆನೀಗ॥

**೪ನೆಯ ಚೌಕ:—**

ಸುಭದ್ರಾ ಅಳುವುದು ಕೇಳಿ ಅಭಿಮನ್ಯು ಅಳಬ್ಯಾಡ ತಾಯಿ
ಧೈರ್ಯ ಹಿಡಿಯನ್ನಾ ।

ನಿಮ್ಮ ಅಣ್ಣಾಗಳ ಆಶಾ ಇನ್ನ ಬೀಡು ನೀನಾ ।
ನನಗ ಕೊಟ್ಟಂಥ ಹೆಣ್ಣಾ ಆ ವತ್ಸಲನ ।
ತರದಿದ್ದರ ನಮ್ಮ ತಂದಿ ಅರ್ಜುನನ–
ವೀರ್ಯದಿಂದ ಹುಟ್ಟಿ ಫಲವೇನ ।
ಮೂರು ಲೋಕದೊಳಗಾಗುವೆ ಅವಮಾನ ॥

ಕೇಳೆ ತಾಯಿ ನಿನ್ನ ದಯಾ ಇದ್ದರ ಪೂರ್ವಾದ್ರಿ ಪಶ್ಚಿಮ–
ಕಿಡುದರಿದೇನ ।
ಪಶ್ಚಿಮಾದ್ರಿ ಪೂರ್ವಕ ತರುವೆನು ನಾನಾ ।
ಒಂದೆ ಬಾಣದಿಂದ ಆರಸುವೆ ಸಮುದ್ರವನಾ ।
ವಾಸುಕಿಫಣಿ ಮೆಟ್ಟಿ ಕುಣಿದಾಡಿ ಪಾತಾಳ–
ದಿಂದೆಳತರುವೆನಾ ಶೇಷನ್ನಾ ।
ಬುಡಮೇಲ ಮಾಡುವೆ ಬ್ರಹ್ಮಾಂಡವನಾ ॥

ಇಂಥಾ ಮಗನು ನಾನಿನ್ನಂತಿರಲಿಕ್ಕೆ ನೆನೆಸುದ್ಯಾಕ ನಿಮ್ಮ
ಅಣ್ಣಾಗಳನಾ ।
ನೆಪ್ಪ ತಗಬ್ಯಾಡ ದನಧ್ಹಿಂಡ ಕಾಯುವನ ।
ನೇಗಲ್ಹೊಡೆವ ಒಕ್ಕಲಿಗ್ಯಾ ಬಳಿರಾಮನ್ನ ।
ಮಾನಭಂಗ ಮಾಡಿ ಆ ಹೆಣ್ಣಾ ತಂದರ–
ಆಗನ್ನ ಪಾಂಡವರ ಕುಲರನ್ನಾ ।
ಯಾಂವ ಒಯ್ತಾನ್ನಡಿ ಆ ಹೆಣ್ಣಾನ್ನಾ ॥
ಹೀಂಗಂದು ಅಭಿಮನ್ಯು ನುಡಿದಾ ಒತ್ತರಲಿ–
ರಥಾ ಹೂಡಿದಾ ಸಿಟ್ಟಿಲಿ ।
ಬಿಲ್ಲಬಾಣ ತಗೊಂಡ ಕೈಯಲಿ ॥
ತನ್ನ ತಾಯಿ ಸುಭದ್ರಾನ್ನ ಸಾರಥಿಮಾಡಿ
ಕುದರಿ ಹೊಡ್ಯಾಕ ಹಚ್ಚಿದಾ ಅವಸರಲಿ ।
ರಥಾs ಹೊಡೆದಳಬ್ಬರಲಿ ॥
ದಾರಿ ಹಿಡಿದಾರ ಸುತ್ತ ಅಂತಕರ್ತ ದ್ವಾರಕಿಗಿ–

ಸನಿ ಆಗುವ್ಹಾಂಗ ಹಂಚಿಕಿಲಿ ।
ಕುದುರಿ ಜಿಗಿಸ್ಯಾಳ ಅಂತಂತರಲಿ ॥
ಮುಂದ ಬಂದು ಅರಣ್ಯದ ವನಾ ।
ರಥ ಸಡಿಯುದು ಗಿಡಮುಂಜನಾ ॥
ಅಭಿಮನ್ಯು ಏರಿಸಿ ಬಾಣವನಾ ।
ಹೊಡಿದು ಗಿಡಾ ಸವರಿದೆಲ್ಲಾನಾ ।
ತನ್ನ ರಥಕ ಮಾಡಿದಾ ದಾರಿನಾ ॥
ದರಜಿಲ್ಲ ಅವಸಿಗೇಸೇನಾ ॥
ಲಕ್ಷಾವಧಿ ಗಿಡಗಳೆಲ್ಲಾ ಲಕ್ಷ್ಯವಿಲ್ಲ ಕಡಿದ ವನದ ರಾಕ್ಷಸರು
ಅಭಿಮಾನ್ಯಾಗ ।
ತಿಸ್ಸುವಪೇಕ್ಷೆಯಿಂದ ಮುತ್ತಿಕೊಂಡರವಗ ।
ನೋಡಿ ತಾಯಿ ಸುಭದ್ರಾ ಅಂಜ್ಯಾಳ ಆಗ ।
ಆಡಿದ ಮಾತಿಗಿ ತಿರುಗಿ ಹೂಡಿದರ-
ಸಿಟ್ಟು ಬಂತು ಆ ಗಿರಿಧರಗ ।
ಮುಂದ ವತ್ಸಲಾಹರಣ ಹೇಳುವೆನೀಗ ॥

೫ನೆಯ ಚೌಕ:—

ಆರ್ಭಾಟದಿಂದ ಅಭಿಮನ್ಯು ಸುಭದ್ರಾಗಂತಾನ ತಾಯಿ ಅಂಜಬ್ಯಾಡ
ಧೈರ್ಯ ಹಿಡದು ನೋಡು ಕುಂತ ।
ಹೀಂಗಂದು ಬಾಣ ಹೊಡೆದಾ ಇಲ್ಲ ಪುರಸತ್ತ ।
ಬಂದ ರಾಕ್ಷಸರನೆಲ್ಲ ತರಿದೊಟ್ಟುತಾ ।
ತೂರಿದ ಬಾಣಗಳಿಂದ ಏರಿದ ದೈತ್ಯರ ರುಂಡ-
ಕಾರಿದ ರಕ್ತದೊಳು ಕೆಡಹುತಾ ।
ಚಂಡವಿಲ್ಲದೆ ಬಿದ್ದಾವೊ ದಂಡ ಕುಣಕೋತ ॥
ಕೇಳಿ ಸುದ್ದಿ ಘಟೋದ್ಗಜಾ ಹೋಳೀ ಆಡೂನಂದು ಬಂದು।
ಗೋಳಿಡಿಸಿ ಹೋದ ಚೀರಾಡುತಾ ।
ಅಳತಿಲ್ಲದಷ್ಟು ಬಾಣ ಬಂದು ನಡುವತ ।
ತಾಳಲಾರದೆ ಅಭಿಮನ್ಯು ಬಿದ್ದ ಸತ್ತ ।

ಹೇಳಲಾರೆನಾ ವೇಳೆಯೊಳಗ ಸುಭದ್ರಾ ಕಾಳಗ- ।
ದೊಳು ಮಗನವಚೂತಾ।
ತೆಕ್ಕಿ ಹಾಯ್ದು ದುಃಖ ಮಾಡತಾಳ ಬಡಕೋತ ॥
ಮಗನೇ, ನಿನ್ನ ಪ್ರಾಣ ಇಲ್ಲೇ ಹೋಗೂದಿತ್ತೇನೊ ಎಲ್ಲಿ
ಅದಾನಂತ ಹುಡುಕಲೆತ್ತ ।
ಸೊಲ್ಲು ಸೊಲ್ಲಿಗೆ ಕರೆವೆ ಅಭಿಮನ್ಯು ಅಂತ ।
ನೀನಿಲ್ಲದೆ ಬರುತಿದ್ದ್ಯೋ ಕುಣಕೋತ ।
ನಿನ್ನಂಥ ಮಗನ ಬಿಟ್ಟು ಇನ್ನೇನಂತಿರಲಿ ಅಯ್ಯೋ-
ನನ್ನಂಥ ಖೋಡೀ ಪ್ರಾಣ ಹೋಗಲೆಂತ ।
ಪ್ರಾಣ ಕೊಡಾಕ ನಿಂತಾಳ ಹರಿ ನೆನೆಯುತ ॥
ಕೇಳಿ ಕೃಷ್ಣಮೂರುತಿ ವನದೇವತಿ ಆಗಿ ಬಂದು-
ಅಂತಾನ ಸುಭದ್ರಾ, ಪ್ರಾಣ ಕೊಡಬೇಡಾ ॥
ನಿನ್ನ ಮಗನ್ನೆಬ್ಬಿಸ್ತೇನು ಧೈರ್ಯ ಬಿಡಬೇಡಾ ॥
ನಿನ್ನ ಎರಡೂ ಹಸ್ತದಲಿ ನಾ ಸಂಜೀವ ಅಭಯ ಕೊಟ್ಟೆ-
ನಿನ್ನ ಮಗನ ಮ್ಯಾಲ ಎಳೀ ಗಡಾ ।
ಅಂವಾ ಏಳತಾನ ಹೋಗು, ಮಾಡೂದಿಲ್ಲ ತಡಾ ॥
ಇಷ್ಟು ಕೇಳಿ ಸುಭದ್ರಾ ತನ್ನ ಬಲಗೈ-
ಹಸ್ತ ಎಳದಾಳ ಮಾಡಿ ದೌಡಾ ।
ಅಭಿಮನ್ಯು ಎದ್ದುನಿಂತಾ ಬಾಣ ಹಿಡಿದು ಪ್ರೌಢಾ ॥
ಘಟೋದ್ಗಜಾನ ನೋಡಿ ಬೊಬ್ಬಿರಿದಾ ।
ತಡ ಮಾಡಲಿಲ್ಲ ಬಾಣದಿಂದ ಹೊಡೆದಾ ॥
ಘಟೋದ್ಗಜಾ ಭೂಮಿಗುರುಳಿದಾ ।
ಅಭಿಮನ್ಯುನ ಬಾಣದಿಂದ ಮಡಿದಾ ॥
ಅವನ ತಾಯಿ ಹೇಡಂಬಿ ತಿಳಿದಾ ।
ಬಂದು ಅಳತಾಳ ಮಗನ ಮ್ಯಾಲ ಬಿದ್ದಾ ॥
ನಿನ್ನ ಕೊಂದಂಥವ ಯಾವ ಹೇಳೊ ನನ್ನ ಮಗನೆ ಬಿಡೂದಿಲ್ಲ ನಾ ಅವಗ।

ನಿಮ್ಮ ತಂದಿಗ್ಹೇಳಿ ಭೀಮಸೇನನಿಗ।
ಅವನಿಂದ ಕೊಲ್ಲಿಸ್ತಿನಿ ನಿನ್ನ ಕೊಂದವಗ।
ಆಡಿದ ಮಾತಿಗಿ ತಿರುಗಿ ಹೂಡಿದರ–
ಸಿಟ್ಟು ಬಂತು ಆ ಗಿರಿಧರಗ।
ಮುಂದ ವತ್ಸಲಾಹರಣ ಹೇಳುವೆನೀಗ॥

೬ನೆಯ ಚೌಕ:—

ಹೇಡಂಬಿ ಅಳುವುದು ಕೇಳಿ ಸುಭದ್ರಾ ಅಂತಾಳ ನಿನ್ನ ಪತಿಯಾರವ್ವಾ?
ಹೇಡಂಬಿ ಹೇಳ್ಯಾಳ ಪಾಂಡವರ ಭೀಮ।
ವನವಾಸಕ ಬಂದಾಗ ಸಂಗಾದವ್ವಾ।
ಅವನ ವೀರ್ಯದಿಂದ ಹುಟ್ಟಿದಂಥ ಈ–
ಘಟೋದ್ಗಜಾ ನನ್ನ ಮಗನವ್ವಾ।
ನಕುಲ ಸಹದೇವ ಅರ್ಜುನ ಮೈದುನ, ಭಾವ ಧರ್ಮಾ॥

ಕೇಳಿ ಸುಭದ್ರಾ ತೆಕ್ಕ್ಯಾದಾಳ! ಹೇಡಂಬ! ನಾನು–ನೀನು ಒಂದೆ ನೆಗಿಯಾಣೆವ್ವ।
ನಾ ಅರ್ಜುನನ ಸತಿ! ನೀ ಕೇಳವ್ವ।
ನಿನ್ನ ಮಗನ್ನೆಬ್ಬಿಸ್ತೀನು ಧೈರ್ಯ ತಾಳವ್ವ।
ಹೇಳಿ ಸುಭದ್ರಾ ತನ್ನ ಎಡಗೈ ಹಸ್ತ ಘಟೋ–
ದ್ಗಜಾನ ಮ್ಯಾಲ ಎಳದಾಳ ಆಗ ಪ್ರೇಮಾ।
ಘಟೋದ್ಗಜಾ ಎದ್ದುನಿಂತಾ ಆಗ ಜೀವಾತ್ಮಾ

ಎದ್ದಾಕ್ಷಣವೆ ಬಾಣ ಹಿಡಿದು ಹೊಡೆಯುತ್ತಿದ್ದಾ–ಹೇಡಂಬಿ ಅಂತಾಳ
ಮಾಡಬ್ಯಾಡ ಹಮ್ಮಾ।
ಇವರ್ಯಾರು? ಅಭಿಮನ್ಯು–ನಿನ್ನ ತಮ್ಮ।
ನಿನ್ನ ತಾಯಿ ಸುಭದ್ರಾಗ ಮಾಡೊ ನಮೋನಮ।
ತಾಯಿ ಮಾತಿಗಿ ನಮಸ್ಕಾರ ಮಾಡಿ–
ಕರಕೊಂಡು ಹೊಂಟಾನ ತನ್ನ ಗ್ರಾಮ।
ಬಂದ ಕಾರ್ಯ ಕೇಳ್ಯಾನ ಕೂಡ್ರಿಸಿ ಅವರ ನಾಮ॥

ಅಭಿಮನ್ಯಾಗ ಕೊಟ್ಟಿದ್ಣ್ಣ ಬಳಿರಾಮ ಕೌರವನ ಮಗಗ–
ಲಗ್ನ ಮಾಡಿ ಕುಡತಾನೋ ।
ಅದಕಾಗಿ ಹೊರಟು ಬಂದಿನೊ ॥
ಇಷ್ಟು ಮಾತು ಕೇಳಿ ಘಟೋದ್ಗಜಾ ಅಂತಾನ
ಆ ಹೆಣ್ಣ ಹೋಗಿ ತರತಿನೊ ।
ನಿಮಗ ಲಗ್ನ ಮಾಡಿ ಕುಡತಿನೊ ॥
ಹೀಂಗ ಹೇಳಿ ಘಟೋದ್ಗಜಾ ಜಾಂಗಿ–
ಮಾಮಾನ ಕರಕೊಂಡು ಹೊಂಟಾನೊ ।
ಮಾಯಾಪೂರ ಹಾದ್ಯಾಗ ಕಟ್ಯಾನೊ ॥
ಗೋಪಕಂಟಿ ಬೆಳ್ಳಿ ಬಂಗಾರ ದೀನಸಾ ।
ವಸ್ತ್ರಾ ಒಡವಿ ಆಗ್ಯಾವ ರಾಕ್ಷಸಾ ॥
ಬೇಕಾದಂಥ ವಸ್ತ್ರ ಸೆಲ್ಲೆ ಮುಂಡಾಸಾ ।
ಆಗಿ ಅಂಗಡಿ ಹಚ್ಯಾರ ಮಾಡಿ ಮೋಸಾ ॥
ದುರ್ಯೋಧನನ ಸಿಬ್ಬಣ ನೋಡಿ ಖಾಸಾ ।
ತಗೊಳ್ಳಾಕ ಹೋದರಾಗಿ ಉಲ್ಲಾಸಾ ।
ಹಳಿದುಕೊಟ್ಟು ಹೊಸದೊಯ್ಯಿರೆಂತ ಹೇಳಿದರ ಕೇಳಿ ದಂಡ
ಮನಬಲ್ಲಾಂಗ
ಹಳೆದೊಯ್ದು ಒಗದಾರವರಂಗಡ್ಯಾಗ ।
ಆಡಿದ ಮಾತಿಗಿ ತಿರುಗಿ ಹೂಡಿದರ–
ಸಿಟ್ಟು ಬಂತು ಆ ಗಿರಿಧರಗ ।
ಮುಂದ ವತ್ಸಲಾಹರಣ ಹೇಳುವೆನೀಗ ॥

೭ ನೆಯ ಚೌಕ—

ದುರ್ಯೋಧನನ ದಂಡ ಸುಲಿಸಿಕೊಂಡು ಜಾಂಗೀಮಾಮಾ—
ಘಟೋದ್ಗಜಾ ಹೆಂಗಸ್ರಾದರು ।
ಬಳಿರಾಮನರಮನೆಯೊಳಗ್ಹೋದರು ।
ರೇವತಿಯ ಮುಂದ ತೋಡ ಹೇಳಿದರು ।
ವತ್ಸಲಾದೇವೀಗಿ ವಸ್ತ್ರ ಇಡಿಸಿ ನೋಡೂಸಂತ–

ದುರ್ಯೋಧನ ಸಮ್ಮಸ್ನ ಕಳಿಸಿದರು ।
ಲಗು ಕರಕೊಂಡು ಬಾ ಅಂತ ಹೇಳಿದರು ॥
ಕೇಳಿ ರೇವತಿ ತನ್ನ ಮಗಳನು ಒಪ್ಪಸ್ಯಾಳ, ತಗೊಂಡು ತಮ್
ವನಕ ಜಿಗಿದರು ।
ಸುಭದ್ರಾನ ಮುಂದ ಒಯ್ದು ಇಳಿಸಿದರು ।
ನನ್ನ ಸೊಸಿನ ತಗೋ ತಾಯಿ ಅಂತಾರು ।
ಹೇಳಿ ಘಟೋದ್ಗಜಾ ವತ್ಸಲಾನ ರೂಪಾಗಿ–
ಮತ್ತ ಒಯ್ದು ರೇವತಿಗೊಪ್ಪಿಸಿದರು ।
ಅಲ್ಲೆ ಮದುವಿ ಆರಂಭ! ಅರಿಸಿಣ ಹಚ್ಚಿದರು ॥
ದುರ್ಯೋಧನನ ಮಗ–ಲಕ್ಷ್ಮಣಕುಮಾರಗ ಹಾಸಕ್ಕಿ ಮ್ಯಾಲ–
ವಾಸ ಮಾಡಿಸಿದರು ।
ಮಾಯು–ವತ್ಸಲಾನ ಬಳಿಯಲಿ ನಿಲಿಸಿದರು ।
ವೇದಘೋಷ ಬ್ರಾಹ್ಮರು ನುಡಿಸಿದರು ।
ಅಂತರ್ಪಟ ಹಿಡಿದುಕೇರಿ ಮಂಗಳಾಷ್ಟಕನ್ನುವಾಗ–
ಕಾಲ ತುಳಿದು ಮದುಮಗನ ಮಾಡಿದ ಜೇರು ।
ಅಂಜಿ ಹೊಯ್ಕೊಂಡಾ ಎಲ್ಲಾ ಗಾಬಾದರು ॥
ಹೆಂಗಸಲ್ಲ ಇದು ರಾಕ್ಷಸ್ಯಿತಿ ನನ್ನ ಈಗ ತಿಂತ್ಯೆತೆಂತ ಹಾಕಿದ
ಕಣ್ಣೀರು ।
ಹಿಂಗ ಅಂದಾಕ್ಷಣವೆ ಎಲ್ಲರಂಜಿದರು ।
ವಸ್ತುವಡವಿ ನೆಲ್ಲೆಮುಂಡಾಸದ ರಾಕ್ಷಸರು ।
ಹೊಡೆದು ದುರ್ಯೋಧನನ ನಿಬ್ಬಣ ಮಾನಭಂಗ–
ಮಾಡಿ ಒತ್ತಲೆ ಓಡಿಸಿದರು ।
ಘಟೋದ್ಗಜಾ ಜಾಂಗಿಮಾಪಾ ತಿರ್ಗಿ ಬಂದರು ॥
ಅಭಿಮನ್ಯುನ ಮದುವಿಗಿ ಮಾಯಾರೂಪದಿಂದ–
ಬ್ರಾಹ್ಮಣರ ತಂದಾರು ಓಡ್ಯಾಡಿ ।
ಪ್ರತಿಲಗ್ನ ಮಾಡ್ಯಾರ ಗಡಬಿಡಿ ॥

ಅಭಿಮನ್ಯಾಗ ವತ್ಸಲಾಗ ಲಗ್ನ ಆಯಿತಂತ ಕೃಷ್ಣ-
ಚಪ್ಪಳಿಕ್ಕಿ ಹೊಡೆದಾ ಲೋಲಾಡಿ ।
ಬಳಿರಾಮಗ ಸುಮಾರಾಯ್ತು ನೋಡಿ ॥
ಹೀಂಗ ಆಗಬಾರದೆಂದು ತಾ ತಿಳಿದಾ ।
ತನ್ನ ತಮ್ಮ ಕೃಷ್ಣಗ ಹೇಳಿದಾ ॥
ಕೃಷ್ಣ ಅಭಿಮನ್ಯುನ ಕರೆತಂದಾ ।
ಪ್ರತಿಲಗ್ನ ಮಾಡಿದಾ ಗರ್ದಿಯಿಂದ ॥
ಕೌರವರ ಮಾನ ಹೋಯ್ತು ಬಂದ ।
ಹರಿ ತನ್ನ ವಚನ ನಡಿಸಿದಾ ॥
ಕೊಟ್ಟಂಥ ಭಾಷಿಗೀ ಬಿಟ್ಟು ನಡೆದರ ಪೆಟ್ಟು ಹತ್ತುವದು
ಮನಸ್ಸ್ಯಾಗ ।
**ರಾಣು-ಕುಬಣ್ಣ** ಹೇಳಿದಾನ ಇದರ್ಹಾಂಗ ।
ಅಂವ ಇರುವದು ಮಾಲಿಂಗಪುರದಾಗ ।
ಆಡಿದ ಮಾತಿಗಿ ತಿರುಗಿ ಹೊಡಿದರ-
ಸಿಟ್ಟು ಬಂತು ಆ ಗಿರಿಧರಗ ।
ಮುಂದ ವತ್ಸಲಾಹರಣ ಹೇಳುವೆನೀಗ ॥



# ಗೋಕುಲಾಷ್ಟಮಿ

೧ನೆಯ ಚೌಕ:—

ಶ್ರೀ ಗೋಪಿಕಾಸ್ತ್ರೀಯರು
ಅಷ್ಟನಾಯಕಿಣೆರು
ಬಾಲಗರುಡೆರು
ಹುಡುಕತಾರ ಕೃಷ್ಣನಾ ।
ಸಾವಿತ್ರಿ ಸತ್ಯಭಾವೆು ಕೂಡಿ ಹುಡಕತಾರ–
ಗೋಕುಲಷ್ಟಮಿೂ ದಿನಾ ॥
ಆದಿ ನಾರಾಯಣ ನರಹರಿ
ಅನಿಸಿದಾ ಬ್ರಹ್ಮಚಾರಿ
ಮುಕುಂದ ಮುರಹರಿ
ಗೋವಿಂದ ಗಿರಿಧಾರಿ
ವಾಮನ ಲಂಬೋದರಿ
ವಸುದೇವ ದೇವಕಿನಂದನ ।
ಯಶೋದಾ ಕೇಳತಾಳ ಕಂಡಿರೇನ
ಗೋಪಾಲ ಬಾಲ ಪಾಲನ ॥
ಮಾಯಾರೂಪದವ ತ್ರಿಲೋಕಸಂಚಾರಿ
ಪೀತಾಂಬರಧಾರಿ
ಸಿಗವೊಲ್ಲ ಶ್ರೀಹರಿ
ಎಲ್ಲಿ ಕೂತ ಮರ ಏರಿ
ಮಾಡತಾನ ಮಸ್ಕರಿ
ನೀಲವರ್ಣ ನಿರ್ಗುಣಾ ।
ಗೋಗ್ರಾಣದೊಳಗಿರುವಂಥ ಗೋವಿಂದ
ಅನಿಸಿದ ಗೋವರ್ಧನಾ ॥
ಮತ್ಸ್ಯಕೂರಮ ವರಹ ವಾಮನಾ ಬಳಿಗೆ
ಪಾತಾಳ ಮೆಟ್ಟಿದ ಕೇಶವಾ ।

ನರಸಿಂಹ ಪರಶುರಾಮ, ರಾಮನಾಮ
ಹೆಚ್ಚಿಂದು ನಿಂದು ಮಾಧವಾ।
ಪಾಂಡವರ ಪ್ರತಿಪಾಲ ಮಾಡಿದಂಥ
ಶ್ರೀಕೃಷ್ಣದೇವ ಭಾರ್ಗವಾ।
ಛಪ್ಪನ್ನಕೋಟಿ ಯಾದವರ ಮನಿಯ
ಕುಲದೀಪ ಸ್ವಾಮಿ ಆದವಾ॥
ಸ್ವಾಮಿಯಾಗುಣ ವರ್ಣಿಸುತ
ಹೊಂಟಾಳ ರಾಧಾರಾಣಿ
ಅವಡಿ ಅಂಬಿ ಪದ್ಮಿಣಿ
ಭೀಮಿ ರಾಮಿ ನಾಗಿಣಿ
ಚೋಳಿ ಮಾಳಿ ಚಿಂಚಿಣಿ
ಭೈರಾವಳಿ ಶಂಕಿಣಿ
ಮಧುರ ವೈನಿ ಹಸ್ತಿನಿ।
ನಾಗಕನ್ಯೆ ದೇವಕನ್ಯೆ
ನೋಡೂನ ಸೀರಾಟ
ಸ್ತ್ರೀಯರ ಚಲ್ಲಾಟ
ಕೃಷ್ಣ ತಂದ ಸಂಕಟ
ಕಂಡಿರೇನ ಅವನ ಮುಕುಟ
ಕಿರೀಟ ಕುಂಡಲ ಕುಂದನಾ।
ಯಮುನಾದ ಹೊಳಿಯ ದಂಡೀಲಿ ಬಂದು
ನೆರದಾರ ಅಷ್ಟಮಿಯಾದಿನಾ॥

೨ ನೆಯ ಚೌಕ:—

ನಾರ್ಯಾರ ಹೆಜ್ಜಿಗತ್ತ ಕೈಕೈ ಹಿಡಿವುದು
ಪುಗಡೀ ಹಾಕಿ ಆಡುದು
ಗಾಯನ ಮಾಡುದು
ರಾಗ ಛತ್ತೀಸ ರಾಗಿಣಿ।

ಬಾವನ್ನ ತಾಳ ಮ್ಯಾಲ ರಾಗ ಮಾಡತಾಳ
ಬಸದ ಕೋಗಿಲ್ಹಾಂಗ ಧನಿ ॥
ಸ್ತ್ರೀಯರ ಚೆಲುವಿಕಿ ಒಬ್ಬರಕಿಂತ ಒಬ್ಬರು ಸೇಲ
ನಾಮೇಲ ನೀಮೇಲ
ಜೇತಲ ಗುಲ್ಲಾಲ
ಓಕಳಿ ಮೈಯೆಲ್ಲಾ
ಹಚ್ಚಿದಾಂಗ ಹಿಲ್ಲಾಲ
ಮೂಡಲ ತರಂಗಿಣಿ ।
ಭಂಗಾರ ಬಳೀ ಚಂದ್ರದ ಹಾರ
ಕೊರಳಾಗ ರತ್ನದ ಮಣಿ ॥
ತಬಲ ತಂಬೂರಿ ವೀಣಾ ತಗೊಂಡು
ನಾಚ ಮಾಡ್ತಾಳ ನಾಯ್ಕಣಿ ।
ತಾಳ ಮಂದಲಿ ಗತ್ತಿನ ಒಳಗ ರಾಧಕೀ
ಕುಣಿಯುತಾಳ ಶಿರೋಮಣಿ ।
ನಾರದs ನೋಡಿಕೇರಿ ನಾಚಿ ಮಾರಿ
ತಿರಮ್ಯಾನ ಕುಟಿಲಗುಣಮಣಿ ।
ಇಂದ್ರಸಭಾ ತಂದು ಇಳಮ್ಯಾರ
ಕನ್ನೆರು ನೋಡತಾಳ ರುಕ್ಮಿಣಿ ॥
ಪುಗಡೀ ಆಟ ಏನ ಹೇಳಲಿ
ತಾಳಗತ್ತ ಮಾಡಿದಾಂಗ
ನಗಾರಿ ನುಡಿದಾಂಗ
ದುಮುದುಮಿ ಹೊಡಿದಾಂಗ
ನೌಬತ್ತ ಬಡಿದಾಂಗ
ಕೊಂಬಕಾಳಿ ಹಿಡಿದಾಂಗ
ಸಿಡ್ಲಮಿಂಚ ಕಡಿದಾಂಗ
ಮುಗ್ಗಿಪಾಟ್ಲಿ ಹೆಣಿದಾಂಗ
ಸುದ್ದಸವಿಲ ಕುಣಿದಾಂಗ

ತಂಡತಂಡ ಸೇರದಿತೊ ಜನಾ।
ಕುಣಿಕುಣಿದು ದಣಿದು ಬ್ಯಾಸತ್ತು ನಿಂತಿದಾರ
ಗೋಕುಲಷ್ಟಮಿಾದಿನಾ॥

೩ನೆಯ ಚೌಕ:—

ನೀರಾಟ ಜಕಣ್ಯಾರು
ನಿಂತಾರ ನಿಸ್ಸಂಗ
ಪೀತಾಂಬರ ಇಲ್ಲದಾಂಗ
ಕೃಷ್ಣ ಪೋದ ಕಳ್ಳನಾಂಗ
ಮರದ ಮ್ಯಾಲ ಹಾಸಿದಾ।
ಹಾಸಗೊಂಡು ಮ್ಯಾಗ ಹೊಚಗೊಂಡು
ಮಾರಿ ಮುಚಗೊಂಡು ಕೃಷ್ಣ ಮಲಗಿದಾ॥
ರಂಬಿ ನಿಂಬಿ ಸೀತಿ ಗೀತಿ
ಹಾಲಸೊಸರ ಮಡಿಕೀ ಎತ್ತಿ
ಹೋಗತಾರ ಮಧುರಾ ಸಂತಿ
ಅಡ್ಡಬಂದು ತರುಬಿದಾ।
ಅವನ ಮುಂದೆ ಹೇಳತಾರ ಸುದ್ದಿ ನಿನಗ ಬಲು
ಹುಡುಕತಾಳ ಯಶೋದಾ॥
ಈ ಸುದ್ದಿ ಬಲ್ಲೆ ನಾ ಪದ್ದಿ ತಗೊಂಡ ಬೆಣ್ಣಿಮುದ್ದಿ
ಮುಸರ ಚಲ್ಲಿದಾ।
ಉಟ್ಟ ಶಾಲಿ ಪೀತಾಂಬರ ಸೆಳದ, ಮರದ ಮ್ಯಾಲ ಎಳದ
ಮೈಯು ಮುಟ್ಟಿದಾ।
ಗೌಳಗಿತ್ತಿ ಶಂಕ ಹೊಡದಾಳ ಶೋಕ ಮಾಡ್ಯಾಳ
ಜಿಗಿದು ಹಾರಿದಾ।
ವಸದಾಗ ಬಿಂದ್ರ ಬಸದಾಗ ಹೋಗಿ
ಶ್ರೀಕೃಷ್ಣಸ್ವಾಮಿ ಅಡಗಿದಾ॥
ನಾರದ ನೋಡಿಕೇರಿ
ಹೇಳ್ಯಾಸ ಕಿಡಿಗೇಡಿ

ಬಾಲ್ಯಾರ ಗಡಿಬಿಡಿ
ನಾ ಹಿಡಿ ನೀ ಹಿಡಿ
ಏರತಾರ ಗ್ವಾಡಿ ಹೂಡಿ
ನಾಕುಕಡಿ ಒದ್ದಾಡಿ ಇಂದ್ರುವನ ಶೋಧಮಾಡಿ।
ಶೋಧಮಾಡಿ ಶೋಕಮಾಡಿ
ಒಬ್ಬರಕೊಬ್ರು ಮಾತನಾಡಿ
ಒಟ್ಟ ಮುರದು ಸಿಟ್ಟಮಾಡಿ
ಒಂದಿನಾರೆ ಸಿಕ್ಕಾಕ್ನಡಿ
ನೆಲ ನುಂಗಿತೇನ ಕೃಷ್ಣನಾ।
ಕುಣಕುಣದು ದಣಿದು ಬ್ಯಾಸತ್ತು
ನಿಂತಿದಾರ ಗೋಕುಲಷ್ಟಮಿಾದಿನಾ॥

*　　*　　*　　*

ಗುರು ಹರದಾಸರ ಕವಿ **ಸಂಗಣ್ಣ**ನ
ಲಾವಣಿ ಕೇಳಿರಿ ಜನಾ।
ಕುಣಿಕುಣಿದು ದಣಿದು ಬ್ಯಾಸತ್ತು ನಿಂತಿದಾರ
ಗೋಕುಲಷ್ಟಮಿಾದಿನಾ॥



೪೨

# ಚಂದ್ರಣಿ

೧ನೆಯ ಚೌಕ:—

ಚಂದ್ರಣಿ ಚಂದನದ ಗೊಂಬಿ
ರತ್ನದ ಕಂಬ । ಆದಿ ಜಗದಂಬಿ-
ಯಂಗ ಡೌಲಾ ।
ನಿನ್ನ ಸರಿ ಈಗ ದೇವತೆರು ಯಾರು ಇಲ್ಲಾ ।
ಎಸು ಬೇಡಿ ಬಂದೆ ಶಿವನಲ್ಲಿ ಎಷ್ಟು ಅಮಲಾ ।
ಮದವೇರಿಸಿ ಹೊಂಟಂಗ ಆನಿ
ಜಾತ ಪದ್ಮೀಣಿ । ಪಟ್ಟದಾ ರಾಣಿ
ಗಾದಿ ವ್ಯಾಲಿ ॥
ನಿನ ಪ್ರಾಯ ತುಂಬಿದಾ ಹೊಳಿ
ಬಾಳಿಯಽ ಸುಳಿ । ಚಂದ್ರಸ ಕಳಿ
ಕಸರ ಇಲ್ಲಾ ।
ಆದಿ ವಿಷ್ಣು ಪಿಂಡ ಮಾಡಿದಾಸ ತಗದ ಹೊಯ್‌ಲಾ ।
ಬಿನ್ನಬ್ಯಾಸರಿಲ್ಲದೆ ತಿದ್ದಿ ಕೈಕಾಲಾ ।
ಮಹೇಶ್ವರ ಜೀವದ ಧನಿ
ಬ್ರಹ್ಮ ಬರೆದ ಫಣಿ । ಬೇಡಿ ಬಂದೆ ಜಾಣಿ
ಸುಳ್ಳೇನಲ್ಲಾ ॥
ನಿನ್ನ ಮೂಗ ಸಂಪಿಗಿ ತೆನಿ
ಮುತ್ತಿನಾ ಗೊನಿ । ಕೋಗಿಲಾಂಗ ಧನಿ
ಎಳಿಯ ಕಮಲಾ ।
ಓಣಿ ಹಿಡಿದ ಹೊಂಟಿ ಕುಣಿದ್ಹಾಂಗ ಗಂಡ ನವಿಲಾ ।
ಮುಂದಿದಂಗವರದ ಸಿಂತ ನೋಡಿ ನಿನ್ನ ಪುಜಲಾ ।
ನಿನ್ನ ವನಪ ನೋಡಿ ನಾ ಬೆರತ
ಮನಿಯಮಾರ ಮರತ । ಹಾರಿತ ನನ ಸುರತ
ಬಿದ್ಹಾಂಗ ಸಿಡಿಲಾ ॥

ಈ ಹೆಣ್ಣಾ ತೇಜಿಯುs ಮುರಿ ।
ಉಚ್ಚಿದಂಗ ವರಿ ।
ಅಲ್ಲ ಇಕಿ ಸರಿ । ಶಿವಸ ಮುನಿ ರಂಬಾ ॥
ಉಟ್ಟ ಶಾಲಿ ಪಿತಾಂಬರ ಜರಪ ।
ಕಣ್ಣಾನೋಡಿ ತೆರಡ ।
ಹೊರಟೆ ಮೂಗ ಮುರಡ । ಎಷ್ಟ ನಿನ್ನ ಜಂಭಾ ॥
ಸೀ ಹೆಣ್ಣಾರಾಧಿ ರುಕ್ಮಿಣಿ ।
ರತ್ನದಾ ಮಣಿ ।
ಪೂವಿನಾ ಗೊನಿ । ಉಚ್ಚಿದಾಂಗ ತುಂಬಾ ॥
ತುಂಬ ಉಚ್ಚಿದಾಂಗ ವ್ಯೆಸರದಿ
ಭಾರನಾಗದೊರದಿ । ಕೇಳ ಸನ ನರದಿ
ಮಾಡಿ ಖುಲ್ಲಾ ।
ನಿನ್ನ ಕಂಡು ಮರತ ಮುನಿವಾರ ಜಿಂದಗಿ ಎಲ್ಲ ।
ಏನು ಬೇಡಿ ಬಂದೆ ಶಿವನಲ್ಲಿ ಎಷ್ಟು ಅಮುಲ ।
ಮದವೇರಿಸಿ ಹೊಂಟಂಗ ಆನಿ
ಜಾತಪದ್ಮೀನಿ । ಪಟ್ಟದರಾಣಿ
ಗಾದಿಯು ಮ್ಯಾಲ ॥

೨ನೆಯ ಚೌಕ:—

ಪರಸ್ತ್ರೀಯುಳು ನಾ ಪತಿವರತಿ
ಗಂಡಸುಳ್ಳ ಗರತಿ । ಮುಂದ ನಿಂದರತಿ
ಯಾಕೊ ಸಪ್ಪಾ ।
ನನ್ನ ಕಂಡು ಯಾಸಿದೀಡಿ ಮಾತನಾಡುದು ಎಷ್ಟಾ ।
ಅಣ್ಣಂತ ಕರೆದ ನಾ ಭಾಳ ಮಮುತ ಇಟ್ಟಾ ।
ಬಾಳ್ವೆಗೇಡಿ ಅಲ್ಲ ನಿನ ರೀತಿ
ಇದ್ದೆನು ಪತಿವರತಿ । ವ್ಯರ್ಥ ತಿಂದಿ ಲತ್ತಿ
ಬಲವಿನೇಟಾ ॥

ಖಾಸಖೂನ ಕೇಳತೀ ಗೊತ್ತ
ಬಂದ ಈ ಹೊತ್ತ । ಅಲ್ಲ ನಿನ್ನ ಮಾತ
ಇದ್ವೀ ಸೋಟಾ ।

ಸನ್ನ ವಗತನ ಹರಿಸಿ ಸಿಂದೇಸು ಹೋಗುದು ಗಂಟಾ ।
ಜಸದ ಹರಲಿ ಹೊರಸಿ ಒಣಾವಮಾಡಿಯೊ ಬೋಬಾಟಾ ।
ಮತಿಮಂದ ಮನಸ್ಯಾ ಪಾಮಾರ
ಎಲ್ಲಿ ಇಟ್ಟಿ ಖಬರ । ತಿಳಿದ ನೋಡೊ ಪೂರ
ಮನಸಗೊಟ್ಟ್ಯಾ ॥

ನಿನ್ನ ಎಲುವು ಹಾಕಸೇಸು ಗ್ವಾಳಿ
ಕಾಲುಹಿಡಿದ ಸೀಳಿ । ಕಾಣಸ್ವಾರು ಹೊಳಿ
ಮಾಡಿ ಹಿಟ್ಟ್ಯಾ ।

ಸನ್ನ ಭಾವ ಮೈದುನಾ ಗಂಡ ಭಾಳ ಕೆಟ್ಟ್ಯಾ ।
ಅವರು ಕೇಳಿದ್ರ ನಿನ್ನ ಪ್ರಾಣ ಕೊಂದಾರು ಸ್ಪಷ್ಟ್ಯಾ ।
ಇನ್ನು ತಡಮಾಡದೆ ಬಂತೊ ನಿನ್ನ ಆಶಿ
ಆದಿಯೋ ಘಾಸಿ । ಭಾಳ ಮಂದಿ ಘಾಸಿ
ಬಿದ್ದಾರೊ ಎಷ್ಟ್ಯಾ ॥

ನಿನ್ನ ಹೆಣಾ ಅಡವಿಯ ಪಾಲ ।
ಹಾದರಕ ಮೂಲ ।
ಒದಗಿ ಬಂತೊ ಕಾಲ । ನಿನ್ನ ಸುತ್ತ ಕರ್ಮ ॥
ತಂಗೆಂತ ಕರೆದಿ ಈಸು ದಿನಾ ।
ಗಂಡಸ ಬೈಮಾನ ।
ಕೆಡಸಿದಿ ಮಾನ । ಬೆಳಸಿದ್ಯೋ ವರ್ಮ ॥

ಉಂಡಮನೀ ಗಳಾ ಎಣಸಾವಾ ।
ಸಿಂದೆ ಆಡಾವಾ ।
ನಾಚಿಕಿಲ್ಲದಾವಾ । ಜೀವಕ ತುಸು ಶರ್ಮ ॥

ನಾ ನಿನಗ ಹೇಳತಿನಿ ತಿಳಸಿ
ತಿಳಿಯೊ ಮನದಾಸಿ । ನೋಡೊ ನೀ ಸೋಸಿ
ಇನ್ನ ಮ್ಯಾಲ ।
ಕಾಳ ಒದಗಿ ಬಂತೊ ನಿನ್ನ ಸುತ್ತ ಆಗಿ ಮೂಲಾ ।
ಏನು ಬೇಡಿ ಬಂದಿ ಶಿವನಲ್ಲಿ ಎಷ್ಟು ಅಮಲಾ ।
ಮದವೇರಿಸಿ ಹೊಂಟಂಗ ಆನಿ
ಜಾತಪದ್ಮಿನಿ । ಪಟ್ಟದರಾಣಿ
ಗಾದಿ ಮ್ಯಾಲ ॥

೩ ನೆಯ ಚೌಕ:—

ಭಲೆ ಭಲೆರಿ ಹೆಣ್ಣ ಹೊಯುಮಲ್ಲಿ
ಬಲ್ಲೆ ನಿನ ನೆಲಿ । ಮಾತ ನಿನ್ನಲ್ಲಿ
ಎಷ್ಟು ಧಮುಕಾ ।
ಇಷ್ಟು ಧಾಕ ಹೇಳಿದರ ಅಂಜಾವಲ್ಲ ಜೀವಕ ।
ಮುಂಚ ಮಲಗಂಟಿನೊಳಗ ಬರತಿದ್ದೆ ಮಂದಿರಕ ।
ಬಲ್ಹಾಂಗೆ ಹಾಕಿದಿ ಗುದಮುರಗಿ
ಸಂದು ಸಿಂದು ವಾರಗಿ । ಮಾಡಸಂದಿ ಸರಗಿ
ಕೊಳ್ಳಾಗ ಪದಕಾ ॥
ಕುಚ ಹಿಡಿದರ ನಗತಿದ್ದಿ ಚಂದ
ಖುಷಿಯು ಮನದಂದ । ಅಕ್ಕರತಿನಿಂದ
ಭಾಳ ಯಮುಕಾ ।
ಮೈನೆರೆದ ಬಳಿಕ ಬರತೆನ ಅಂತ ಶಯನಕ ।
ಮುಂಚೆ ನೀನೆ ಹೇಳಿದಿ ತಿಳದ ನೋಡ ಮನಕ ।
ಕೇಳೊನಾ ಹಾರತಿ ಅಂತರಲಿ
ಎಷ್ಟು ನಿನಬಲಿ । ಎಳಿಯು ಕೋಮಲಿ
ಸಾಕ ಮುರಕಾ ॥
ನನ್ನ ಸುತ್ತ ಹಾಕತಿದ್ದೆ ಫೇರಿ

ಗುದ್ದಿ ಸಣ್ಣ ಪೋರಿ । ಕೊಂಡುಕೊಟ್ಟ ಕೊಬರಿ
ಯು ತಿಲ್ಲಾಕ ।
ಸುಳ್ಳಂದ್ರ ಸಾಕ್ಷಿ ನಿಸ ಗೆಳತಿ ಹಾಳ ಇದಕ ।
ಮಾಡಲಾರ್ದೆ ಬೋಬಾಟಾ ಸುದ್ದಿ ಆಯ್ತು ಜನಕ ।
ನೀ ಸುಳ್ಳೆ ಹೊತ್ತಿ ಒಣ ಹರಲಿ
ಯಾಕ ಒರವಲ್ಲಿ । ತಿಳಿಯೆ ಮನದಲ್ಲಿ
ನಿನ್ನ ಜೀವಕ ॥

ನಿನ್ನ ಭಾವ ಮೈದುನಾ ಯಾವ ।
ಇಲ್ಲ ಅರಿದಾವ ।
ಎಲ್ಲಿ ಕಡದಾಂಸ । ಹೇಳಬ್ಯಾಡ ಫಂದಾ ॥
ಕುಡು ವಚಸ ಗಳಿಸ ಮನಸ್ಯಾನ ।
ಇರಲಿಯೇ ಖೂಸ ।
ಭಾಳ ದಿನತಾಸ । ತಿಳದ ನೋಡ ಮುಂದ ॥
ನೀ ಬೆಳಸಬ್ಯಾಡ ಒಣ ಹಿರಸ ।
ಮಾತಿನಾ ತುರಸ ।
ಹೇಡಿ ನಿಸ ಪುರುಷ । ನೋಡಿದೆಸ ಇಂದ ॥

ಈ ವ್ಯರ್ಥ ಜನ್ಮ ಒಣಾ ಭ್ರಾಂತಿ
ಮಾತ ಕೇಳ ಕಾಂತಿ । ಮಾಡಿಕೊ ಸಂತಿ
ಇನ್ನ ಮ್ಯಾಲ ।
ಈ ಪ್ರಾಯ ಮೀರಿದ ಮ್ಯಾಲ ಏನು ಮಾಡುದು ತೊಗಲ ।
ಏನು ಬೇಡಿ ಬಂದೆ ಶಿವನಲ್ಲಿ ಎಷ್ಟು ಅಮಲಾ ।
ಮದವೇರಿಸಿ ಹೊಂಟಾಂಗ ಆನಿ
ಜಾತಪದ್ಮಿನಿ । ಪಟ್ಟದರಾಣಿ
ಗಾದಿ ಮ್ಯಾಲ ॥

೪ ನೆಯ ಚೌಕ—

ನಾರಿ ಮರಳ ಆಗ್ಯಾಳ ತನ್ನ ಮನಕ

ಬರತ ಈ ಕ್ಷಣಕ । ಬಂಗಾರದ ತುಣಕ
ದೊರದಿ ನನಗ ।
ಕೈ ಹಿಡದು ಕರಿಯುತಾಳ ರಂಗಮಾಲಿನೊಳಗ ।
ಗಾದಿ ಲೇಪ ಹಾಸಿದಾಳ ಚಪ್ಪರಪಲ್ಲಂಗ ।
ನನ್ನ ಉಪ್ಪರ ಕುಚಾ ಒತ್ತಿ ಹಿಡಿರಿ
ಮೆಲ್ಲಕ ಗಲ್ಲ ಕಡಿರಿ । ಅಸ್ಮಾನ ಮಾಡಿಗಿಡಿರಿ
ಮನಸಿನೊಳಗ ॥
ಮನ್ಮಥ ಸುರಿಸಿದಾಂಗ ಮಳಿ
ಕಾಮನಾಟ ಬಳಿ । ಚಿಕ್ಕ ಪ್ರಾಯ ಎಳಿ
ಕಮಲಿನ್ಹಾಂಗ ।
ಮನಸೋತು ಮನಸ ಇಟ್ಟು ಮರಳ ಆಗ್ಯಾಳ ಅವಗ ।
ಮದವೇರಿ ಮನಿಗಿ ಹೋಗಿ ಕರಿತಾಳ ಗೆಣಿಯಾಗ ।
ಗೆಣ್ಯಾ ಅಂದ ಆಯ್ತು ನನ್ನ ಕೆಲಸ
ಕೆಟ್ಟವ ನಿನ್ನ ಪುರುಷಾ । ಯಾತರ ವಿಶ್ವಾಸ
ಅವಂದು ನನಗ ॥
ಸವಿ ಹಚ್ಚಿ ಗೆಣ್ಯಾ ಸರಕೊಂಡ
ಗೆಳತಿ ಗಾಳಿಗೊಂಡ । ಎಂದ ಸತ್ತಾ ಗಂಡ
ಅಂತಾಳ ಆಗ ।
ಅವನ ಕೊಲ್ಲುವ ಯುಕ್ತಿ ಮಾಡ್ಯಾಳ ಮನಸಿನೊಳಗ ।
ವಿಷತಂದು ಕೂಡಿಸ್ಯಾಳ ಚಿನ್ನಿಯ ಸಕ್ಕರ್ಯಾಗ ।
ಹಾಲತುಪ್ಪ ನೀಡಿದಾಳ ಹಣಿಸಿ
ಸಕ್ಕರಿ ಸುರಸಿ । ಹೋಳಿಗಿ ಎಣಿಸಿ
ಕೊಟ್ಟಳವಗ ॥
ಗಂಡ ಹಸಿದ ಉಂಡ ಬಳಿತಾಗಿ ।
ವಿಷಾ ಬಿತ್ತು ಹೋಗಿ ।
ಜೀವ ತಗಬೀಗಿ । ಆಯ್ತು ಸಂಕಷ್ಟಾ ॥

ನಿಮಗ ಅಗ್ರ ಆಗದವ ಒಳಿನೋಟ ।
ನಂಜ ಆಯ್ತು ಊಟ ।
ಹೋಳಿಗಿದು ಅಷ್ಟ । ಹೊಡಿಯುತಾಳ ಫಾಟಾ ॥
ಧಗಿ ಬಿದ್ದು ಪ್ರಾಣ ಬಿಟ್ಟ ಸವಸ ।
ಕೊಂದಿದಾಳ ಮವನಾ ।
ಮಾಡಿ ಆಕಿ ನೆವನ । ಅಳುದು ಆರ್ಭಾಟಾ ॥
ಬಡಕೊಂಡು ಅಳ್ತಾಳ ಹಾರ್‍ಯಾಡಿ
ಜನಾ ಬಂತು ಓಡಿ । ಶಿವಾ ಕಿಡಿಗೇಡಿ
ಒಯ್ದ್ನಲ್ಲಾ ।
ನನ್ನ ಗಂಡನ ವ್ಯಾಲಿಂದು ನಾನೆ ಸಾಯುಲಿಲ್ಲ ।
ಅಳುವುದು ನೋಡಿ ಜನಗೋಳ ಹಿಡಿತ ಎಲ್ಲಾ ।
ಮದವೇರಿಸಿ ಹೊಂಟಂಗ ಆನಿ
ಜಾತಪದ್ಮಿನಿ । ಪಟ್ಟದರಾಣಿ
ಗಾದಿ ವ್ಯಾಲ ॥

೩ ನೆಯ ಚೌಕ:—

ಊರಮಂದಿ ಜನಾ ಆಯ್ತು ಗ್ವಾಳಿ
ಕಂಬಳಿ ಮಾಡಿ ಚಾಳಿ । ಬಂದಿದಾರ ಹುಗಳಿ
ಮುಗಿತ ಝುಟ್ಟಾ ।
ಸಾರಿ ಮನಸಿನೊಳಗ ಖುಸಿಯಾಲ ಆಗ್ಯಾಳ ಎಷ್ಟಾ ।
ಆ ಕ್ಷಣಕ ಗೆಣ್ಯಾನ ಮುಸಿಗಿ ಹೋಗಿ ಹಾಕ್ಯಾಳ ಗಂಟಾ ।
ನನ್ನ ಗಂಡಂದು ಹೇಳತಿದ್ದಿ ಧಾಕ
ಕೊಂದ ನಾ ಠೀಕ । ಅನಮಾನಿನ್ನ್ಯಾಕ
ನಡಿರಿ ಲಗಟಾ ॥

ಗೆಣ್ಯಾ ವಿಚಾರಮಾಡಿದಾ ತಿಳಿದ
ವಿಶ್ವಾಸೇನಿಕಿದ । ತನ್ನ ಗಂಡಂದ
ಪ್ರಾಣ ನಷ್ಟಾ ।

ಜೀವ ಹೊಡಿಲಾಕ ಹಿಂದಮುಂದ ನೋಡಲಿಲ್ಲ ಎಳ್ಳಷ್ಟ ।
ಒಂದು ಘಳಿಗಿ ಗೆಣ್ಯಾನಾ ಏನು ಇಕಿಗಿ ಸ್ಪಷ್ಟಾ ।
ಏಳ ರಂಡಿ ಯಾತರಿಶ್ವಾಸ
ಕೊಂದಿ ಮನಿ ಅರಸ । ನನಗ ಮಾಡೀ ನೋಸ
ಹೋಗ ಹೊಂಟ ॥

ಕೈಯಿಂದು ಬಾಯಿಂದು ಕಳಕೊಂಡ
ಕೊಂದ ನನ ಗಂಡ । ಆಯಿತಪ್ಪ ಭಂಡ
ನನ ಅದೃಷ್ಟಾ ।

ನನ್ನ ಗಂಡ ಇರೂತನ ಮಾನವಿತ್ತ ಎಷ್ಟಾ ।
ಕರಿನಾಯಿ ಕೇಳಲದಾಂಗ ಈಗ ಆಯ್ತು ಇಷ್ಟಾ ।
ಊನಾಗಿ ಕುಂತ ನಾ ರಂಡಿ
ಎರುವ ಆಯ್ತು ದಂಡಿ । ಭಾಗ್ಯದಾ ಬಂಡಿ
ಹೋಯಿತ ಹೊಂಟಾ ॥

ಹಾದರಕ ಬೆಂಕಿ ಹಚ್ಚಲೆಂದ ।
ಗಂಡನ ಕೊಂದ ।
ತಿಳಿಯಲಿಲ್ಲ ಮುಂದ । ಅಂತಾಳ ಸುಂದರಾ ॥
ಕಲಿಮಹಾತ್ಮ್ಯದೊಳಗ ಇಲ್ಲ ಆಳತಿ ।
ಹೆಂಗಸರ ಜಗಳ ಅತಿ ।
ರಾಣಿ ಇಲ್ಲ ಗರತಿ । ಉಳಿಯಲಿಲ್ಲ ಯಾರಾ ॥
ಇರುವ ಗ್ರಾಮು ಹಲಸಂಗಿ ಊರ ।
ಪ್ರಸನ್ನ ದಸ್ತಗೀರ ।
ದಾದೆಸಾಬ ಪೀರ । ಮತಿಯ ಕೊಟ್ಟಪೂರಾ ॥

ಸಂಗು ವಸ್ತಾದ ರಾಯಪ್ಪನ ಹೆಸರ
ಶಿಶಾ ಹಾನ ಶಿಖರಾ । **ಬಾಜಾ** ಕವೀಶ್ವರ
ಅನಿಸಿ ಮಿಗಿಲಾ ।

ಖಂಡೂನ ಸೂರ ವೈರಿಗಿ ಚಿತ್ತ ದಿಗಿಲಾ ।
ಏನು ಬೇಡಿ ಬಂದಿ ಶಿವಸಲ್ಲಿ ಎಷ್ಟು ಅಮಲಾ ।
ಮದವೇರಿ ಹೊಂಟಾಂಗ ಆನಿ
ಜಾತಪದ್ಮೀನಿ । ಪಟ್ಟದರಾಣಿ
ಗಾದಿ ವ್ಯಾಲ ॥

---

# ಬಸರಿದ್ದೀನ್ನೆಸರಿನ್ನೇನಿಡೂನ ?

**೧ನೆಯ ಚೌಕ:—**

ಸತಿಪತಿ ಕೂಡಿ ಜೋಡಿ
ಹಿತದಿಂದ ಮಲಗಿದಾಗ
‘ ಗೊತ್ತಮಾಡಿ ಹೇಳ್ಗಂಡಾ ಹ್ಯಾಂಗ್ಮಾಡೂಸ ?
ನಿನ್ಮುಂದ ಮಾತೊಂದು
ಬಿಚ್ಚಿಮುಚ್ಚಿ ಹೇಳ್ತೀನು
ಬಸರಿದ್ದೀನ್ನೆಸರಿನ್ನ ಏನಿಡೂನ’ ? ॥

ಗಂಡ ಹಿಗ್ಗಿ ನಕ್ಕ ನಗಿ
‘ಸುಳ್ಳ ತಗಿ ಗಾಳಮಾತ
ನನ್ಮುಂದ ಹೇಳಬ್ಯಾಡ ಇಂಥಾ ಹೊಯ್ಕಾ ’ ।
‘ಔ ಶಿವನೆ ಎಂಥಾ ಮಾತ ?
ತಿಂಗಳ ಮ್ಯಾಲ ಒಂದಿನಾ ಆಯ್ತು
ಮುಂದಿ ಹಾಂಗ ಹೇಳಕ್ಕೆಲ್ಲ ನಾ ಸುಮಕ’ ॥

‘ಕುರುಬರಂಥ ಅರಬರಂಡಿ
ಜರಬದಿಂದ ಬೇಡ್ಕೋಳ್ತೀನು
ಅರಬಿ ಸಾಹಿತಮಾಡ ಕೂಸೀಗಿ ಮೆತ್ತಗ್ಹಾಸುದಕ ।
ಕೆಟ್ಟ ತೊಟ್ಲ ಕಟ್ಟಾಂವಲ್ಲ
ನಿತ್ತ ತೂಗು ಆಳುವಾಗ
ಬಿಟ್ಟು ಹೊರಗ ಹೋದರೊದ್ದು ಮುರದೇಸ ಸೊಣಕ॥

ಖುಷಿಯಿಂದ ಕೂತಕೊಂಡು
ಹೇಣ್ತಿಮುಂದ ಹೇಳ್ತಾನ
‘ಮಕ್ಕಳ ಮಾರಿ ಇದ್ದಿದಿಲ್ಲ ಇಂದಿನತನಕಾ ।
ಇನ್ನ ಮಾತ್ರ ದೇವರ ಕೊಟ್ಟಾ

ಸಂಶಾ ಇಲ್ಲ ಎಳ್ಳಷ್ಟ
ನೆಡತಸ ಮಾಡಬೇಕು ನನ್ಮ ತಕ್ಕಾ'॥

ಹೆಣತ್ಹೇಳತಾಳ ಓಡ್ಯಾಡಿ।
'ವರ ನೋಡಿ ಬಾರ ತಿರುಗಾಡಿ॥
ಮುಚ್ಚಿ ಹುಚ್ಚ ಸಂಥವ ನೀ ಖೋಡಿ।
ಕೋರಿ ಹರಕರ ನೆಡತಸ ಮಾಡಿಗೇಡಿ॥
ಅಳಿಯುನ್ಗ ಹಾಕಬೇಕು ಖಡಿತೋಡಿ।
ಸೀರಿಕುಬಸ ಬೇಕ ಧೋತ್ರ ಜೋಡಿ॥

ಯಾತರಾಗ ಏನೂ ಇಲ್ಲ
ಖಾತ್ರಿ ಮಾತ್ರ ಬೀಗರು ಬೇಕು
ರಾತ್ರಿಹಗಲ ಕೂಡಿ ನಾವು ಮದವಿ ಮಾಡೂನ।

ನಿನ್ಮಂದ ಮಾತ ಒಂದು
ಬಿಚ್ಚಿಮುಚ್ಚಿ ಹೇಳ್ತೀನು
ಬಸರಿದ್ದೀನ್ಹೆಸರಿನ್ನೇನಿಡೂನ॥

೨ ನೆಯ ಚೌಕ:—

'ಅಬ್ರುಗೇಡಿ ರಂಡಿ ನೀನು
ಖಬರ್ಹ್ವಾರೀ ಮಾತಾಡಬ್ಯಾಡ
ಇಬ್ರೂ ಕಾರಭಾರ ಮಾಡಿದ್ರು ಮನಿ ಸಾಗೀತ ಹ್ಯಾಂಗ'?

'ಒಂದು ಬೇಕು ಒಂದಿಲ್ಲ!
ಇಂದ ಹಿಡಿದ್ರು ಮನಿಯಾಗ
ಸೂಲಗಿತ್ತಿ ಶೋಧಮಾಡ ಮುಚ್ಚೀ ಹೋಗ'॥

'ಚೊಚ್ಚಲ ಮಗ ಹುಟ್ಟಿದರ
ಗಚ್ಚಿಲೆ ಬಚ್ಚಲ ಮುಚ್ಚಬೇಕ
ಹುಚ್ಚಿಯೇನು ಕೂಸೀಗಿ ನೀರಾ ಹನ್ಸುದ್ಹ್ಯಾಂಗ'।

'ಕೊಡ ಹರವಿ ಇಡೂ ಜಾಗ
ಸನೀದಾಗ ಮಾಡಬೇಕ
ಉಳ್ಳದ್ದಾಂಗ ಸುರಳೀ ಸುತ್ತಿ ಸಿಂಬಿ ಇಡಬೇಕ' ॥

'ಸಣ್ಣ ನೂಲಿನ ಎಣ್ಣೀ ಅರಬಿ
ತಣ್ಣಗಾದರ ಕಡಿದಾಡೀನ
ಸುಣ್ಣಗೊರಿಸಿ ಕೂಸಿನ ಮೈಯ್ಯ ಚೊಕ್ಕ ಇಡಬೇಕ' ।
ಖುಷಿಯಿಂದ ಕೂತುಕೊಂಡು
ಅಕ್ಕರ್ತಿ ಒಂದು ಎತ್ತಿಕೊಂಡು
ಹೌಸದಿಂದ ಮುದ್ದಕೊಟ್ಟು ಜೋಗುಳ ಪಾಡಬೇಕ' ॥

'ತೊಟ್ಲ ಕಟ್ಟುವ ಜಾಗ ವೈನಿಲ್ಲಾ ।
ಪಡಸಲಿಗೆ ಕುಲಾಬಿ ವಂಕಿಲ್ಲಾ' ॥
'ರೊಕ್ಕ ಕೊಟ್ಟೇದ ಕಂಬಾರ್ಗ ಹಾಸಿಲಾ ।
ವ್ಯಾಳ್ಯಾಕ ಮಾಡಿಕುಡವೊಲ್ಲಾ ॥
ರೊಕ್ಕ ಹೋದ್ರು ಹರಕತ್ತ ಇಲ್ಲಾ ।
ಸಂತಿಗ್ಹೋಗಿ ತರ್ತೀನು ನಿರ್ವಾಹಿಲ್ಲಾ' ॥

ತಿಂಗಳ ಬಸರಾ ಕೇಳಿಕೊಂಡು
ಗುಂಗಭಾಳ ಸೇರ್ಯಾದಪ್ಪ
ಮಂಗನ್ಹಾಂಗ ಮಾಡತಾನ ಮಾಡಲಿನ್ನೇನ ।
ನಿಸ್ಮಂದ ಮಾತ ಒಂದು
ಬಿಚ್ಚಿಮುಚ್ಚಿ ಹೇಳ್ತೀನು
ಬಸರಿದ್ದೀನ್ಹೆಸರಿನ್ನ ಏನಿಡೂನ ॥

೩ನೆಯ ಚೌಕ:—

'ಏಸ್ಕಿನಾ ನೋಡಿದರ
ಧ್ಯಾಸೆಲ್ಲಾ ಕೂಸಿನ ಮ್ಯಾಲ

ಆಶಾ ಇಲ್ಲ ನನ್ನ ವ್ಯಾಲ ಪುಸಃ ಪುರುಷಾ ।
ನೆರಿಹೊರಿ ಓಣಿ ಓಣಿ
ಫೇರಿಹಾಕಿ ನೋಡಿಬಾರ
ಧೀರೇ ಆಗ್ತಾದ ತಂದು ಇಡು ಹೊರಸಾ ॥
ಇಂದ ನಿಂತು ಸಂತಿಗ್ಹೋಗಿ
ಮಾಹಿತ್ಮಾಡಿ ಸಾಹಿತ್ತಗೋ
ಬೆಲ್ಲ ಅಕ್ಕಿ ಲಕ್ಕ ಚಕ್ಕ ಎಲಿಕಾಚಾ ।
ಪಾರಿಖ್ಹೊಬ್ರಿ ಆರಿಸಿ ತಗೊ
ಘೋರಾದ್ರ ಪೂರೈಸೀತು
ಬ್ಯಾರೇ ಒಂದು ಪುಡಿ ಕಟ್ಟಬೇಕು ಬತ್ತಾಸಾ ॥

ಅಡಕಲಗಡಿಗಿ ಎಲ್ಲಾ ಇಳವಿ
ಹುಡಿಕಿ ತಗೀ ಒಡಕಗಡಿಗಿ
ಬುಡಕಿಡೂ ಅಗಟಗೀಗಿ ಆದೀತಾಯಾಸಾ ।
ಕುಳ್ಳ ನೋಡಿಕೊಂಡು ತಗೊ.
ಫಳ್ಕಾದ್ರ ಪಾಡ ಅಲ್ಲ
ಮಳ್ಳನ್ಹಾಂಗ ಮಾಡಬ್ಯಾಡ ಎಂಥ ಗಂಡಸಾ ॥

ಕಣ್ಣೆಸೊಳಗ ಹಚ್ಚುವ ಕಾಡಿಗಿ ।
ಹಿಡದಿಡಬೇಕಂತ ಮುಂಚಾಗಿ ॥
ನೆರೆಮುನಿಗಿ ಹೋಗಿದ್ದ ಸಿಂಪಿಗಿ ।
ಕಾಡಿಗಿ ಹಿಡಿದು ಕಟ್ಲಾಕ ಹೊರಸಿಗಿ ॥
ಅವಸರಕ ಬರಬೇಕ ಶಾಂವಿಗಿ ।
ತುಪ್ಪದರ ವ್ಯಾಗ ಒಂದು ಮಗಿ ॥

'ಹಿಂದ ಮುಂದ ಅಣ್ತಮ್ಮರು
ಬಂದು ಬಳಗ ಯಾರಿಲ್ಲ
ಹೇಳಬೇಕ ನನ್ನ ಗೆಣತಿಗಿ ಬಾಣ್ತೀಸಾಮಾಸ ।

ನಿಸ್ಮಂದ ಮಾತ ಒಂದು
ಬಿಚ್ಚಿಮುಚ್ಚಿ ಹೇಳ್ತೀನು
ಬಸರಿದ್ದೀನ್ಹೆಸರಿಸ್ನ ಏನಿಡೂನ ॥

೪ನೆಯ ಚೌಕ:—

'ಮುತ್ತ ಬೇಕ ಸುತ್ತಗೆಜ್ಜಿ
ಹತ್ತು ಕೊಟ್ಟರಾಗತಾವ
ಅತ್ತೀ ಹತ್ತರಿಟ್ಟೀದೆನ ಇಪ್ಪತ್ತ ।
ಉಡದಾರ ಉಣ್ಣಿಕಡಿ
ಬಂಗಾರ ಪುತಳೀಸರ
ಮುತ್ತೀನು ಬೇಕ್ಹೇಳ ಇದರ್ಹೊರ್ತ' ॥

'ಅಡದಂಡಿಗಳ್ಹೊಳ್ಳಿ
ಜುಲಪೀಹುವ್ವಾ ಹಲಪಿಗುಳ್ಳಾ
ಸ್ವಲ್ಪ ಕಡಿವ್ಯಾದರಿಲ್ಲ ಸಸಮುತ್ತಾ ।
ಮಣಿಗಾರ ಮನಿಗ್ಹೋಗಿ
ಎಣ್ಣಿಮಣಿ ತಗೊಂಬಾ
ಸರಗಿ ಮುರಗಿ ಸಣ್ಣ ತಾಯಿತಾ ॥

'ಕೂಸಿಗ್ಹಾಲ ಹಾಕುವ ಥಾಲಿ ಮಿಳ್ಳಿ ।
ಸಣ್ಣ ಬಟ್ಟಲದಾಗ ಮಗಾ ಉಳ್ಳಿ' ॥
'ತವರಮನೀದು ತರಹೋಗ ಮಳ್ಳಿ ।
ಆಯಿ ಮುತ್ಯಾಂದು ಮಗ ಹೆಸರ್ಹೆಳ್ಳಿ' ॥
ಆಕಿ ಸುತ್ತ ನಡಿಸಿದಾನ ಹೋಳಿ ।
ಅಂದಿಗಿಂದಿಗಿ ಲಗೂ ಹೋಗsನಾಳಿ ॥

ಹಡಿಯು ದಿನಾ ಸನೀ ಬಂತು
ಎಂಟsತಿಂಗಳ ಮುಂದುಳೀತು

'ಕೆಟ್ಟಗಿಟ್ಟ ಹಡೆದೀ ನಿಸ್ನ ಜಟ್ಟಾ ಎತ್ತೀಸ ।
ನಿನ್ಮುಂದ ಮಾತ ಒಂದು
ಬಿಚ್ಚಿಮುಚ್ಚಿ ಹೇಳ್ತೀಸು
ಬಸರಿದ್ದೀನ್ಹೆಸರಿನ್ನ ಏನೀಡೂನ ॥

೫ ನೆಯ ಚೌಕ:—

ಜೋಡ್ನಿ ಎಲ್ಲಾ ಕೂಡ್ಸೂದ್ರೊಳಗ
ದೀಡ ತಿಂಗಳಾಯಿತಪ್ಪಾ
ತಡದು ಹೊರಗ ಆದಳಲ್ಲಿಂದ ।
ಗಂಡನ ಮುಂದ ಹೇಳ್ತಾಳ
ಸನಿಯಾಕ ಬರಗೊಡವೊಳ್ಳು
'ಇದು ಇಲ್ಲಿ ಕೇಳು ನನ್ನ ಮಾತೊಂದ ॥

ಹೆಣ್ಣಮಗಳು ಹುಟ್ಟಿದರ
ಬಣ್ಣದ ಒನಿಕಿ ಸಣ್ಣದು ಬೇಕು
ಗುಳ್ಳೆಪಿಲ್ಲೆ ಜೇಳಿಬಾರs ಹೋಗಿ ಇಂದ' ॥

'ಹೆಣ್ಣ ಒಯ್ದುಕ್ಯಾರ ಮಣ್ಣಾಗ್ಹಾಕು
ನೀನೂ ಹೋದರ ಹರಕತ್ತಿಲ್ಲಾ'
ಉಳ್ಳಾಡಿ ಹೊಡದಾನ ಅಲ್ಲಿಂದ ॥

ಕಡದಾಡಿ ಒಡದಾಡಿ
ಗಂಡ ಹರ್ಯಾಗೆದ್ದು
ಅಡವಿಗಿ ಹೋಗ್ಯಾನ ಹೋರೇಕ ।
ಹೋರೆ ಮಾಡಿ ಬರೂದರೊಳಗ
ನೀರ್ ಬೂದಿ ತೊಯಿಸಿಟ್ಟು
ಹೊಲಿಯು ತಗ್ದಾಳಪ್ಪ ಎಲ್ಲಾ ಪಾಕ ॥
'ನೀ ನನ್ನ ಬಡಿಯಬಾರದಿತ್ತ ।
ಕೂಸೀಗಿ ಪೆಟ್ಟು ಪೂರಸ್ತ ॥

ಹೆಣ್ಣಲ್ಲ ಗಂಡ ಹುಟ್ಟಿತ್ತ ।
ಥೇಟ ಹೋಲಿಕಿ ನಿನ್ಹಾಂಗ ಇತ್ತ' ॥
ಗಂಡ ಆಳತಾನ ಭೋರಾಡಿ ಕುಂತ ।
'ಮೊದಲೆ ದೇವರು ಕುಡಬಾರದಿತ್ತ' ॥

ಜನವಾಡದೂರಾ ನೆನದಾನ ಪೀರಾ
ಗುರುಹರ ಮತಿ **ಕೋಟ್ಯಾ**
**ನಾನಾಸಾ**ಬ ಮಾಡ್ಯಾನ ಕವಿ ಇದನಾ ।
ನಿಸ್ಕ್ರಂದ ಮಾತೊಂದು
ಬಿಚ್ಚಿಮುಚ್ಚಿ ಹೇಳ್ತೀನು
ಬಸರಿದ್ದೀನ್ಹೆಸರನ್ನ ಏನೀಡೂಸ ॥

---

# ನಾಗರಪಂಚಮಿ

೧ ನೆಯ ಚೌಕ:—

ಪಂಚಮಿ ಮುಂದ ಇರಟ್ಟಿಗಾಗಿ
ಹಂಚಿಕಿ ಮಾಡತಾಳ
ಸಂಜೀಕಿ ನಮ್ಮವರು ಬರತಾರೊ ।
ಏನು ಮಾಡತಾರೋ ।
ಗೊಂಡ್ಯಾದ ಹಣಿಪಟ್ಟಿನ
ಹಂಡ ಹೋಳಿ ನಃಗಾಗಿ
ಕೊಂಡಾರ ನಮ್ಮವರು ತರತಾರೊ ।
ಇಂದ ಬರತಾರೋ ॥

ನಾಗರ ಪಂಚಮಿ
ನಾಡೀಗಿ ದೊಡ್ಡದು
ನಾಗೇಶಿಗ್ಹಾಲಾ ಎರೆಯುವದು ।
ಒಂದತ್ತ ಇರುವುದು ॥
ಎಂದಿದ್ದರ ನಮ್ಮವರು
ಮುಂದಾಗಿ ಬರೂದಿಲ್ಲ
ಸಂಜೀಗಿ ನನ್ನ ಎರೆಯುವದು ।
ಅಳ್ಳ ಹುರಿಯುವದು ॥

ಹಬ್ಬದ ದಿನ ಹರೆ ಹೊತ್ತಿಲೆ
ಜತ್ತಾಗಿ ಗೆಳತ್ಯಾರು
ಹೊತ್ತೇರಿ ನೀರಾ ತರುವದು ।
ಭಾಳ ಮೆರೆಯುವದು ।
ಇಳಿಹೊತ್ತಿನ ಕಡಿದಿಂದ
ಗೆಳತ್ಯಾರ ಕೂಡ ಹೋಗಿ
ಜೋಕಾಲಿ ಆಡಿ ಬಂದು ದಣಿಯುವದು ।
ಭಾಳ ಉಣ್ಣುವದು ॥

ಹಸರ ಡಪಳಾ । ಸೀರಿ ಪಪ್ಪಳಾ ।
ಜರಕಾಟೀ ।
ನಿತ್ತನಿಲಗಿ ತೀಡಕ್ಕಿ ತುದಿಗಟ್ಟಿ ॥
ಮಗ್ಗಿ ತಗಿಸಿ ಒಗಸೀದ ಕುಬಸಾ
ಕರವತ್ತಕಾಟಿ ।
ಹಂಗೆ ಇಟ್ಟಿದನವ್ವ ಗಂಟಿನಾಗ ಕಟ್ಟಿ ॥
ಚಂದ ಚಂದ ಒಂದೆ ಮಾರೀಗಿ ಗೆಳತ್ಯಾರು
ಹೊಸಥಾಟಿ ।
ಅದರಾಗ ಒಬ್ಬಾಕಿ ನನ್ನ ಸವತಿ ಖೊಟ್ಟಿ ॥
ಜೋಡಿಯುವರು ಗೆಳತ್ಯಾರು
ನೋಡವರು ನನ್ನ ದಾರಿ
ನಾನಾ ತರದ ಸೀರಿ ಉಡುವ್ರವರು ।
ನನ್ನ ಕರೆಯುವರು ।
ಗೊಂಡ್ಯಾದ ಹಣಿಪಟ್ಟಿನ
ಹಂಡಹೋರಿ ನನಗಾಗಿ
ಕೊಂಡಾರ ನಮ್ಮವರು ತರತಾರೋ ।
ಇಂದ ಬರತಾರೋ ॥

೨ನೆಯ ಚೌಕ:—

ಆಯುಗಾರಿಗಿ ಆಳ್ಯಿಟ್ಟಾ
ಅವು ಬ್ಯಾರಿ ಮಾಡಿಟ್ಟ
ಹೋದ ಬಾರಿ ಇತ್ತ ನನ್ನ ಕಾರಭಾರಾ ।
ಮಾಡಿದ ಪಾರಭಾರಾ ।
ತಂಬಿಟ್ಟದ ಉಂಡೀ ಒಳಗ
ಕಡಿಮಿ ಹಾಕಿ ಬೆಲ್ಲ ನಾ
ತಿನ್ನಕ್ಕಿ ನೋಡಿ ಅದರ ಆಕಾರಾ ।
ಬೆಲ್ಲಿನ ಮಜಕೂರಾ ॥

ಭಾಳ ಭಾಳ ಬೆಲ್ಲ ಹಾಕಿ
ಹಾಳ ಮಾಡ್ತಾರ ಮನಿಯಾಗ
ಹೇಳಕೇಳುವರು ಯಾರಿಲ್ಲ ಹಿರಿಯರಾ ।
ತಮ್ಮ ಕಾರಭಾರಾ ।

ಅಣ್ಣಾಸನ ಹೇಣತಿ
ಆಕಿ ಭಾಳ ಘಾಲ್ಗಡಕಿ
ಆಣಿ ಹಾಕಿ ತರಬಿಕೇರ ಕಲಿಸವರಾ ।
ಮನಸ ಒಡಸವರಾ ॥

ಸಂಶಾ ಹೋಗಲಿಲ್ಲ ಮನಸಿ-
ಸಂದು ತೀರಿ ।
ನೆಸಸಿ ನೆಸಸಿ ತವರಮನಿ ದಾರಿ ॥
ತವರಮನಿಯಾಗ ಸಸ್ನ ಐಸೀರಿ ।
ನೆಪ್ಪಾಗಿ ಭುಗಿಲೆಂದು ಎದಿ ಹಾರಿ ॥
ನಸ್ನ ಹೊಟ್ಯಾಗ ಬಿದ್ಹಂಗ ಕಿಚ್ಚ ಉಸರಿ ।
ದೆವ್ವ ಬಡಿದಾಂಗ ಬಿದ್ಹೇಸ್ರಿ ಖಬರ್ದಾರಿ ॥
ಹೊತ್ತ್ಯರೆ ಎಲ್ಲೈತಿ
ನಿತ್ತರ ಒರಲಿಲ್ಲ
ಎತ್ತ್ಯರೆ ಆಗಿ ಹಾರಿತ ಖಬರು ।
ಉಳಿಲಿಲ್ಲ ಅಬರು ।
ಗೊಂಡ್ಯಾದ ಹಣಿಪಟ್ಟಿನ
ಹಂಡ ಹೋರಿ ನಸಗಾಗಿ
ಕೊಂಡಾರ ನಮ್ಮವರು ತರತಾರೊ ।
ಇಂದ ಒರತಾರೋ ॥

೩ನೆಯ ಚೌಕ:—

ಸ್ವಾದರತ್ತಿ ಮಗಳೊಬ್ಬಕಿ
ಹಾದರಗಿತ್ತಿ ಇದ್ದಾಳ್ರಿವ್ವ

೩ ನೆಯ ಚೌಕ—

ಹೋದವ್ರಿಗಿ ಬಂದವ್ರಿಗಿ ಸೇರೂದಿಲ್ಲ ಘಾಲ್ಗಡಿಕಿ ।
ಇಂಥಾ ಕಾಲಗಡಿಕಿ ।
ಚಿಗವ್ವ ನಮ್ಮ
ಕಾಕಾನ ಹೇಣತಿ
ಆಕಿ ಬ್ಯಾಡಂತ ಅಂದಿದ್ದಾಳು ಬೆರಕಿ ।
ಮಾರಿ ಗಂಟ ಹಾಕಿ ॥

ಮತ್ತೊಬ್ಬಾಕಿ ಸ್ವಾದರತ್ತಿ
ಹೋದರಕೀಗಿ ಹತ್ತ್ಯದು ಬಿಸಿ
ಎಲ್ಲಾರೊಳಗ ಠಸಿ ಉಂಡ ತಿರಗಕ್ಕಿ ।
ಇದೇ ಕೆಲಸಿನಾಕಿ ।

ಹೀನ ರಂಡಿ ಆಕಿ
ಪುನಾ ಸೇರುವದಿಲ್ಲ
ದಿನಾ ನಾಕು ಮನಿ ತಿರಗಾಕಿ ।
ಇಂಥಾ ಬಾಯುಬಡಿಕಿ ॥

ನಾಳಿಗಿ ಏರಿ ದಾರಿ ನೋಡಿದ ಹಗಲೆಲ್ಲಾ ।
ನೂಸಿಹರುವ ತಾವರೆ ಸನ್ನ ಕಾಲಾ ॥
ಮೂರು ಸಂಜಿಲೆ ಎತ್ತೊಂದು ಕಂಡೇನ ದಾರಿ ಮ್ಯಾಲ ।
ನೋಡಿ ಮನಸೀಗಿ ಆದೇನ್ರ ಖುಷಿಯಾಲ ॥
ಸಸಿಯಾಕ ಬಂದ್ಹಾಂಗ ಖೂನ ಹತ್ತಿತ್ತೆ ನಮ್ಮದಲ್ಲಾ ।
ಎದಿ ಒಡದು ಬಡಿದ್ಹಾಂಗ ದೊಡ್ಡ ಕಲ್ಲಾ ॥

ಅವ್ವ ಅಕ್ಕಾಗೊಳ ಮುಂದ
ಏನು ಹೇಳಲಿ ಸುಖ ದುಃಖ
ಇಷ್ಟು ಕೇಳಿ ಮನಸಿನಾಗ ಮರಗುವರು ।
ದುಃಖಾ ಮಾಡುವರು ।

ಗೊಂಡೇದ ಹಣಿಪಟ್ಟಿನ
ಹಂಡ ಹೋರಿ ಸಸಗಾಗಿ
ಕೊಂಡಾರ ನಮ್ಮವರು ತರತಾರೊ ।
ಇಂದ ಬರತಾರೋ ॥

**೪ನೆಯ ಚೌಕ:—**

ಹೋದ ಬಾರಿ ಪಂಚವ್ಯಾಗ
ಬೇಕಾದ್ದು ಮಾಡಿದೆನವ್ವ
ನೆನಪಾಗಿ ಕಡುತ್ತೈತಿ ನನ್ನ ಹೊಟ್ಟಿ ।
ಅದು ಏಸು ಸುಟ್ಟಿ ॥

ಅಣ್ಣಾತಮ್ಮರ ಒಳಗ ನಮ್ಮ
ಸಣ್ಣಾತಮ್ಮನ ಹೇಣತಿ
ಪಣತಿ ಮಾರಿಯುಕ್ಕಿ ಆಕಿ ಖೊಟ್ಟಿ ।
ಸಿಂದರಸ್ಯಾಳ ಗಟ್ಟಿ ॥

ತಾಯಿತಂದಿ ಇವರು
ನಾಯಿಮಾರಿಯವರು
ಮಾಯಾ ಇಲ್ಲದೆ ಮರತಾರ ಜಟ್ಟಿ ।
ಹೊಡಿಸಬೇಕ ಕಟ್ಟಿ ॥

ಆಯಿ ಒಬ್ಬಾಕಿ ಇದಿ
ಮಾಯಿ ಕಾಡತಾಳ
ಎಂದ ಹರದೀತು ಇವಳ ರಗಟಿ ।
ಧಡಗಿಯು ಕಟ್ಟಿ ॥

ಕೊಬ್ಬರಿಸರಾ ಗಲ್ಲಕ ಬಡಿವ ಜೋಕಾಲಿ ।
ಭಾಳ ಸಸೀ ನಮ್ಮ ಮನಿ ಬಲ್ಲಿ ॥
ನೆಗಪಿ ಕುಂಡರಸಾಗ ಸರದ ಬಿದ್ದಿತ್ರೆ ಜರದ ಶಾಲಿ ।
ಮ್ಯಾಲ ಹೊಚ್ಚಾಕಿ ಕರವತಕಾಟಿ ಒಲ್ಲಿ ॥

ಭಾಳ ಜಗ್ಗಿ ತೂಗಾಕಿ ಅಲ್ಲವಾ ಜೋಕಾಲಿ ।
ಸರತೀಗೊಮ್ಮ ಕೈ ಇಡಾಕಿ ಜ್ವಾಕೀಲಿ ॥
ಸುಂದರ ಸಖಿಯರ ಮುಖಾ
ಎಂದಾರೆ ಕಂಡೇನೇನ
ಒಂದಾರೆ ಹೋಗಿರಬೇಕು ಎಲ್ಲಾರು ।
ನನ್ನ ಗೆಳತ್ಯಾರು ॥
ಗೊಂಡೇದ ಹಣಿಪಟ್ಟಿನ
ಹಂಡ ಹೋರಿ ನನಗಾಗಿ
ಕೊಂಡಾರ ನಮ್ಮವರು ತರತಾರೊ ।
ಇಂದ ಬರತಾರೊ ॥

೫ ನೆಯ ಚೌಕ:—

ಚಂದರ ಗೊಂಬಿ ನಿನ್ನ
ಎಂದಾರೆ ಕಂಡೇನೆನ
ಬಂದ ಬಂದ ಹೋಗಿರಬೇಕು ಬಸಲಿಂಗಿ ।
ಜಾಡರ ಶಿವಲಿಂಗಿ ?
ಬೆಳದಿಂಗಳ ಆಡಲಾಕ
ಬ್ಯಾಸರಿಕಿ ಇಲ್ಲದಾಕಿ
ಬಂದ ಬಂದ ಕರಿಯಾಕಿ ನಮ್ಮ ರಂಗಿ ।
ಆರ್‍ಯಾರ ಗಂಗಿ ॥
ಗುಳ್ಳವ್ವನ ಇಡುವಾಗ
ಆರ್ತಿಲೆ ಗೆಳತ್ಯಾರು
ಒರತಿದ್ರು ಬಟ್ಟಗುಲಗಂಜೀಗಿ ।
ಕೊಡುತಿದ್ದೆನ ಹೋಗಿ ।
ಮೂರುನ ಸಂಜಿಲಿ
ಗುಳ್ಳವ್ವನ ಬೆಳಗಲಾಕ
ಮನಿ ಮನಿ ಕರೆಯುಕ್ಕ ನಮ್ಮ ಸಂಗಿ ।
ಮಾಲಗಾರ ಸಿಂಗಿ ॥

ಎಲ್ಲಾ ಗ್ವಾಳಿ ಆಗವರ ಬಾಳಿಬಸಿ ।
ಪಂಚಮಿಗೊಮ್ಮ ಕೂಡವರ ಪುರಮಾಸ್‌ಸಿ ॥
ಮೇಲ ಮಾಳಿಗಿ ಏರಾಕಿ ಸನ್ನ ಕಾಸಿ ।
ಕೈಯು ಬೀಸಿ ಕರಿಯಾಕಿ ಹುಬ್ಬ ಹಾರ್ಸಿ ॥
ಸನ್ನ ಮಾತ ಮೀರವಳಲ್ಲವ್ವ ಕುಂಬಾರ ಶೇಷಿ ।
ಇಬ್ಬರು ಮುಂದ ಇರುವವರ ನೇಮುಕಸಿ ॥
ಆಡಲಿಲ್ಲ ಗೆಳತ್ಯಾರ ಒಳಗ
ನೋಡಲಿಲ್ಲ ಒಂದಿನ
ಮಾಡಲಿಲ್ಲ ದಾದ ನನಗ ನಮ್ಮ ತವರವರು ।
ಯಾಕ ಮರತಿದಾರು ।
ಗೊಂಡ್ಯಾದ ಹಣಿಪಟ್ಟಿನ
ಹಂಡ ಹೋರಿ ನನಗಾಗಿ
ಕೊಂಡಾರ ನಮ್ಮವರು ತರತಾರೋ ।
ಇಂದ ಬರತಾರೋ ॥

**೬ ನೆಯ ಚೌಕ:—**

ಬರೂದಿದ್ರ ಬರೂದಿಂದ
ಹೋಗೂದಿದ್ರ ಹೋಗೂದಿಂದ
ಬರದಿದ್ದರ ನನ್ನ ಅದೃಷ್ಟಾ ।
ಇದು ಭಾಳ ಕೆಟ್ಟಾ ।
ಹೀಂಗ ಅಂದು ನಿಂದ್ರೂದ್ರೊಳಗ
ಆಕೀ ಅಣ್ಣ ಬಂದಿದಾನ
ಹಂಡ ಹೋರಿಗ್ಹಾಕಿದಾನ ಮಗ್ಗಿ ಮುಟ್ಟಾ ।
ಹಿಗ್ಗಿದಾಳ ಎಷ್ಟಾ ॥
ಅತ್ತಿ ಮಾವಗ ಹೇಳತಾಳ
ನಾ ಮಾತ್ರ ಹೋಗತೀನಿ

ನೀವು ಮಾತ್ರ ಕಳುಹಬೇಕ ಸಂಶಾ ಬಿಟ್ಟ ।
ಮನಸದಾಸ ಸಿಟ್ಟಾ ॥
ನಾ ಮಾತ್ರ ಕಳುಹತೀನಿ
ನೀ ಮಾತ್ರ ಹಚ್ಚ ಹೀಂಗ
ಹೇಳಿ ಆಕಿ ಮಾವ ಹಚಗೊಟ್ಟಾ ।
ಬುಗಡಿ ನೀರಿ ಕೊಟ್ಟಾ ॥
ತೇರದಾಳ ಸಮೀಪ ಜನವಾಡ ಊರಾ ।
ಉಣುವ ಹೊತ್ತಿಗಿ ಬಂದಾರ ಅವಸರಾ ॥
ಮಗಳ ಬಂದಾಳಂತ ತಾಯೀಗಿ ಆಯಿತ ಧೀರ ।
ತೆಕ್ಕೀಲಿ ಹೊಡದು ಸುರಸ್ಯಾಳೊ ಕಣ್ಣನೀರಾ ॥
ಕರಿಲಾಕ ಬಂದಾರ ವಾರಿಗಿ ಗೆಳತ್ಯಾರ ।
ಮಗಳಿಗಿ ಹೇಳತಾಳ ಹೋಗವ್ವ ಉಂಡಕೇರಾ ॥
ನಾನಾನ ತೋಡಿ ಮಾಡ್ಯಾರ ಜೋಡಿ
ವೈರಿ ನೋಡಿ ಹೋದಾಳ ಓಡಿ
**ನ್ಯಾಮಣ್ಣ** ಮಾಡಿದ ಅಕ್ಷರಾ ।
ತೇರದಾಳ ಊರಾ ।
ಗೊಂಡ್ಯಾದ ಹಣಿಪಟ್ಟಿನ
ಹಂಡಹೋರಿ ನನಗಾಗಿ
ಕೊಂಡಾರ ನಮ್ಮವರು ತರತಾರೋ ।
ಇಂಡ ಬರತಾರೋ ॥

---

# ಕೃಷ್ಣ-ಲೀಲೆ

೧ ನೆಯ ಚೌಕ:—

ಹೊತ್ತು ಹಾಲ್ಮೊಸರ ಸೋರಿ
ಹಿಡಿದೆವೊ ಮಥುರಾ ದಾರಿ
ಹಾದಿಕಟ್ಟಿ ಗಿರಿಧಾರಿ
ಕಾಡಿದಾ ಮುರಹರಿ
ಶ್ರೀಕೃಷ್ಣ ಬಿದ್ದಾ ಖ್ಯಾಲಕ ।
ಗೋವಿಂದ ಬಾಲಮುಕುಂದ-
ಹಾಲಮೊಸರ ಚಲ್ಲಿದಾ ನೆವಲಕ ॥

ಪುಗಡೀ ಹಾಕ್ಯಾನ ಕೈಯು ಹಿಡಿದು
ಬಿಲ್ವರ ಬವಳಿ ಒತ್ತಿ ಹಿಡಿದು
ಸಕರಿ ಮಾಡಿದ ಬಲ್ಲಂಗ್ ಸುಡಿದು
ಯಶೋದಾ ಅಕ್ಕ ಇಟ್ಟ್ಯಾಳ ಹಡಿದು
ಕೊಲ್ಲಿಲ್ಲ ಇಂವಾ ಹುಟ್ಟ್ಯಾನಾ ।
ಗೋಣ್ಯಾಗ ಹಾಕಿ, ಒಣ್ಯಾಗ ಮೆರಸಗೊತ-
ಎಂದ ಒಯ್ದ್ಯಾರ ಇವನ ಹೆಣಾ ॥

ಸೀರೀ ಸೆರಗ ಹಿಡಿದು ಗಚ್ಚಿ
ಎಳದ ಜಗ್ಗಿ ತುಟಿಯು ಕಚ್ಚಿ
ತೊಟ್ಟ ಕುಬಸ ಗಂಟ ಬಿಚ್ಚಿ
ಒತ್ತಿ ಹಿಡದಾನ ಮಲೀಗಚ್ಚಿ
ಮಾಡಿದಾ ನಮ್ಮ ಹಗರಣ ।
ಸಂತಿ ಖೊಳಾವು, ನಮ್ಮ ಕ್ಷ್ಯಾಂತಿ ಮಾಡಿದಾ-
ಎಂಥದು ಸೇರ್‍ಯಾದ ಗುಣಾ ॥

ಮೊಸರಾ ಚಲ್ಲಿ ನೆಲಪಾಲ
ಎತ್ತಿಕೊಂಡು ಕುಡಿದಾ ಹಾಲ

ಗ್ವಾಳೇ ಆಗಿ ಗೋಪ್ಯಾರೆಲ್ಲ
ಸಿಟ್ಟಿಗಿ ಬಂದು ಹೊಡದಾರ ಕಲ್ಲಾ
ಒಡತಾನ ಕಳ್ಳಿಗೊಲ್ಲಾ
ಜಿಗಿದ್ಹ್ಯಾರತಾಸ ಟಣ್ ಟಣಾ ।
ಹವಳ ಬಣ್ಣ ಶ್ಯಾವಳ ನಿಂತು–
ಸಗತಾಸ ಮೇಘವರಣಾ ।

ಗೌಳಗಿತ್ತಿ ಗೋದಾವರಿ ।
ಚಂದ್ರಾವಳಿ ಅಕ್ಕನ ಕಸರಿ ।
ಗಂಗಾಜಮುನಾ ಅವರು ಬ್ಯಾರಿ ।
ಕಾಶಿನಾರ ಬದನಾರಿ ।
ಚಿಮುಣಾ ಚಿತ್ರಕಾಟಿ ಪಾರಿ ।
ಅವಡಿ ಅಮುಸಿ ಸಣ್ಣ ಪೋರಿ ।
ಓಡಿ ಬಂದಾರ ಗಂಗೀ ಗೌರಿ ।
ಭೀಮು ರಾಮು ಸಾವಂತರಿ ॥

ಗ್ವಾಳೀ ಆಗಿ ಎಲ್ಲಾ ಬಂದ
ಹಂಚಿಕ್ಹಾಕಿ ಒಂದ ಒಂದ
ಏನು ಹೇಳಬೇಕ ಛಂದ
ಕಿವಿಗ್ಹಚ್ಚಿ ಕಿವಿತಂಡ
ಮಾತಾಡತಾರ ಮೆಲ್ಲಕ ।
ಗೋವಿಂದ ಬಾಲಮುಕುಂದ–
ಹಾಲಮೊಸರಾ ಚೆಲ್ಲಿದಾ ನೆಲಕ ॥

೨ ನೆಯ ಚೌಕ:—

ಮಾತ ಒಳ್ಳೇ ಧರ್ಮಧರ್ಮ
ಆಡಬ್ಯಾಡ ಹೆಚ್ಚಾ ಕರ್ಮ
ಹಾಸೀಲ ಕೊಟ್ಟುಹೋಗಸ ಸುಮ್ಮ

ಬಿಡಲಾಕಿಲ್ಲ ಖಾವಾಖಾವು
ಹೀಂಗಾದರ ನಮ್ಮ ನೇವು
ಎಂದೀಗಿ ಹೋಗದು ಹುಸಿ ।
ಯಶೋದಾಬಾಯಿ ನಮ್ಮ ತಾಯಿ–
ಆಕೀಗಿ ನೀವು ಆಗಿನಡೀರೆ ಸೊಸಿ

ಗೌಳಗಿತ್ತೀ ಕೇಳರ ಸುಂಕ
ಕೊಟ್ಟು ಹೋಗ ನಮ್ಮ ಹಕ್ಕ
ಸೋರೀ ಒಡೆದರ ಆದೀತ ಮುಕ್ಕ
ಅಬ್ರೂ ಕಳದರ ಆದೀ ಪಿಕ್ಕಾ
ಇದರಾಗಾದ ಏನು ಸುಖ
ನಮ್ಮ ನಿಮ್ಮದಾಗಲಿ ಖುಷಿ ।
ಸಿಟ್ಟೀಗಿ ಬಂದು ಚಟ್ಟೀಗಿ ಒಡೆದರ–
ಅಲ್ಲಿಂದ ಮುಟ್ಟಿತರ ಬಿಸಿ ॥

ಹನ್ನೆರಡು ವರ್ಷಾಯ್ತು ಒದ್ಧ
ಹಾಸೀಸ ಪಸ್ಗ್ಯಾಲಿನಾ ಇಡ್ಡ
ಸಂತೀ ಮಾಡತೀರಿ ಕದ್ದ
ಹೋಗತೀರಿ ಹುಳಬದ್ದ
ನಾಸು ಭಾಳ ಚಪ್ಪಿಸಿ ।
ಮನಸಿಟ್ಟು ಹಾಕದೇನು ಗಂಟ ನಾ–
ನಿಮಗ ಹಿಡದ ಚಪ್ಪಿಸಿ ॥

ಕೈಯ ಮಾಡಿ ಕೃಷ್ಣ ಕರೆದು ।
ಗೋಪಾಳ್ರೆಲ್ಲಾ ಬಂದು ಸೆರೆದು ।
ಗಡಿಗಿ ಒಡದ್ರು ಗೌಳಗೇರದು ।
ಹಾಲಮೊಸರಾ ಹೋಗೂದು ಹರದು ।
ಸುಚ್ಚ ರೊಟ್ಟಿ ಮುರಮುರದು ।

ಕಲಸಿ ಉಂಡಾರ ಹಂಚೀ ಹರದು ।
ಇದರ ಸವಿ ಆದಕ ಬರುದು ॥

ಕೃಷ್ಣನ ಗೂಡ ಗೆಣೆಯರು ಕೂಡಿ
ಗೋಪ್ಯಾರೀಗಿ ಚೇಷ್ಟಿ ಮಾಡಿ
ಪೇಂದ್ಯಾ ಹೋದ ಒಂದು ಕಡಿ
ವಾಕಡ್ಯಾ ಹೋದಾ ಓಡಿ ಓಡಿ
ಸುದಾಮು ಕೃಷ್ಣ ಇಬ್ರು ಕೂಡಿ
ದನಾ ಕಾಯುವ ಕಾಲಕ ।
ಗೋವಿಂದ ಬಾಲಮುಕುಂದ–
ಹಾಲಮಸರಾ ಚೆಲ್ಲಿದಾ ನೆಲಕ ॥

೩ ನೆಯ ಚೌಕ:—

ಕೃಷ್ಣನ ಮಾತ ಏನು ಹೇಳ್ಳಿ
ಒಡದು ಹೋದಾ ಕೈಯಾಸ ಬಳಿ
ಅಕ್ಕಾ ಕೇಳ ಚಂದ್ರಾವಳಿ
ಹೋಗೂನ್ನಡ್ರಿ ಯಮುನಾ ಹೊಳಿ
ನಾವು ನೀವು ನೀರಾಟಕ ।
ಅಕ್ಕತಿ೯ಲೆ ಹೋದ್ರು ಈಸತಿ೯–
ಹೊಳಿಗಿ ಇಂದ್ರವನಘಾಟಕ ॥

ಸೀರಿಕಳದು ಇಟ್ಟಾರ ತಡಿಕಿ
ಆಡತಾರ ಧಡಂ ಧುಡಕಿ
ಕೃಷ್ಣ ಬಂದು ನೋಡಿ ಹುಡಕಿ
ತಗೊಂಡಾಸ ಸೀರಿ ಫಡಕಿ
ಗ್ವಾಳೀ ಮಾಡಿ ಕೀಟಕ ।
ಆ ಸೀರಿ ತಗೊಂಡು ಗಿಡ ಏರಿ–
ಮಸ್ಕರೀ ಮಾಡ್ಯಾನ ಹಟಕ ॥

ಸೀರಿ ಒಯ್ದ್ಯಾ ಏಸುಗತಿ
ನೋಡ್ಯಾರ ಮಾರಿ ಮ್ಯಾಲಕೆತ್ತಿ
ಸೀರೀ ಕುಡೋ ರಘುಪತಿ
ಗಿಡಾ ಏರಿ ಮ್ಯಾಲ ಕೂತಿ
ಮನ್ಯಾಗ ಬಯ್ಯ್ಯಾರ ಮಾವಾ ಅತ್ತಿ
ಮಧ್ಯಾನಾಯ್ತು ಕಷ್ಟಕ ।
ಭಾಳ ಓಡಿ ಆದ ಎಷ್ಟು ಕಾಡ್ತಿ ಏತ್ಕಲಾ–
ಇಳಿದು ಬಾರೊ ಊಟಕ ॥

ಕಯ್ಯು ಮುಗಿದು ನಿನ್ನ ಸ್ತವ ।
ಮಾಡತೀನು ಮಾಧವಾ ।
ಯದುಕುಲ ಯಾದವಾ ।
ನಾರಾಯಣ ಕೇಶವಾ ।
ಪರಶುರಾಮ ಭಾರ್ಗವಾ ।
ರಾಮಚಂದ್ರ ರಾಘವಾ ।
ವಾಮನ ನರಸಿಂಪ ।
ಸೋಳಾಸಾವಿರ ಗೋಪ್ಯಾರ ದೇವ ॥

ಮತ್ಸ್ಯಕೂರಾಮ ವರಾ
ಹಿಡಿದ ಹತ್ತು ಅವತಾರ
ಪೃಥುವಿ ಭೂಭಾರ
ಇಳಿಸಿದ ಶ್ರೀವರಾ
ಸೀರಿ ಕುಡೋ ರಘುವರಾ
ಬಾರೊ ನಮ್ಮ ಮಾಲಕ ।
ಗೋವಿಂದ ಬಾಲಮುಕುಂದ–
ಹಾಲಮಸರ ಚೆಲ್ಲಿದಾ ನೆಲಕ ॥

೪ ನೆಯ ಚೌಕ:—

ಸೋಳಾಸಾವಿರ ಗೋಪ್ಯಾರ ಸಿಟ್ಟಾ
ಮನಸೀನಂದು ಇಳಸಿ ಬಿಟ್ಟಾ
ತೆಳಗ ಬಂದು ಸೀರೀಕೊಟ್ಟಾ
ಬಿಗಿದು ಹಾಕ್ಯಾರ ಮಲಗಂಟ
ಮುಂದವಮಾಡಿ ರೇಸಿಪುೀ ಧಡಿ।
ಬಾಜು ಬಂದ ಗೋಪ್ಯಾರೀಗಿ ಚಂದ ಕಾಣಸತಾವ–
ಕೈಯಾಗ ಬಂಗಾರದ ಚುರಡಿ॥

ಎರಳೀ ಸೋಟದಂಥ ಹೆಣ್ಣಾ
ಸಿಂಹನ್ಹಾಂಗ ನಡs ಸಣ್ಣಾ
ಕುಡಿ ಹುಬ್ಬು ಕಾಡಿಗಿ ಕಣ್ಣಾ
ಹಾಂಗಿತ್ತು ಗೋಪ್ಯಾರ ವರ್ಣ
ತುಟಿs ಹವಳದ ಕುಡಿ।
ಬಂಗಾರ ವಸ್ತ್ರ ಸಿಂಗಾರ ಮಾಡಿ
ಇಟ್ಟಾರ ಬೆಂಕಿಯು ಕಿಡಿ॥

ಸೋಳಾಸಾವಿರ ಗೋಪ್ಯಾರ ಚಿತ್ತ
ಕೃಷ್ಣನ ವ್ಯಾಲ ಭಾಳ ಇತ್ತ
ಒಬ್ಬಾಕಿ ಹೇಳತಾಳ ಮತ್ತ
ನಮ್ಮಸೀಗಿ ನಡೀ ಅಂತ
ಜರಾ ಕಾಯುಲಿಲ್ಲ ಭಿಡಿ।
ಎಲ್ಲರಿಗೆ ಬೈದು ತೆಕ್ಕಿಲ್ಹಾದು ಕೃಷ್ಣಗ–
ತಗೊಂಡು ಹೋಗತಾಳ ಓಡಿ॥

ಗೋಪ್ಯಾರೆಲ್ಲಾ ಗ್ವಾಳೀ ಆಗಿ।
ದೇವರ ವ್ಯಾಲ ಬಿದ್ದಾರ ಮುಗಿ।
ಪೀತಾಂಬರ ಹಿಡಿದ ಜಗ್ಗಿ।

ನೋಡಿ ಬಂತ ಅವಗ ನಗಿ ।
ಬ್ಯಾರೆ ಬ್ಯಾರೆ ಗೋಪ್ಯಾರೀಗಿ ।
ಬ್ಯಾರೆ ಬ್ಯಾರೆ ಕೃಷ್ಣ ಆಗಿ ।
ಸಂತೋಷ ಮಾಡ್ಯಾನೆಲ್ಲಾರಿಗಿ ॥

ನಾಗನಾಥನ ಕವಿಚಡ
ನಾವ್ ಹಾಡುದು ಅವರ ಹಾಡ
ಗುಡು ಬಾಳು ಇಬ್ಬರು ಜೋಡ
ಗುಣಾ ಅಮೃತsss ಕೊಡ
**ಶಿವಲಿಂಗ**ನ ಪಾಲಕ ।
ಗೋವಿಂದ ಬಾಲಮುಕುಂದ–
ಹಾಲಮಸರ ಚೆಲ್ಲಿsದ ನೆsಲಕ ॥

---

# ಅಷ್ಟೂರ ಮಾತಿದು

೧ನೆಯ ಚೌಕ:—

ಅಷ್ಟೂರ ಮಾತಿದು ನಿಷ್ಠೂರ ಹೇಳತೀನಿ-
ಬಿಟ್ಟಿಲ್ಲ ತುಂಬಿsತು ಜಗವೆಲ್ಲಾ ।
ಹೊಟ್ಟೆಯಂಥ ವೈರಿ ಯಾವುದಿಲ್ಲಾ
ರೊಟ್ಟಿಯಂಥ ಮೈತರು ಇಲ್ಲಾ ॥

ವಿಶ್ವಾಸ ಗೆಳೆತsನ ಗೆಳೆತನ ವಿಶ್ವಾಸ
ಅಳೆದು ಬಳಸತಿರಿ ನೀವೆಲ್ಲಾ ।
ಹಿರಿಯುsರ ಕಿರಿಯುs ಮುರಿಯಾದೆ ಉಳಿದಿಲ್ಲ
ಕಾಯ್ದೆ ಬುಕ್ಕ ಓದಿದ ಮ್ಯಾಲ ॥

ಸಾಲಿಗ್ಹಾಕಿ ಮಗನ ಶಾಣೇರ ಮಾಡತೀರಿ
ಹೆಂಡಿ ತಿಸೂದು ಇವರು ಬಿಟ್ಟಿಲ್ಲ ।
ಸಾಲಿ ಕಲ್ತವರೆಲ್ಲ ಶಾಣ್ಯಾರ್ಯಾಕ ಆಗಿಲ್ಲ ?
ತಿಲ್ಲಾಕ ಮನಿಯಾಗ ಕೂಳಿಲ್ಲ ॥

ಸೆರೆಗಾರ ಅಂಗಡಿ—ಶಿವನ ಗದ್ದುಗೀ
ನ್ಯಾಯ ನಡಿಯುಂದು ರಾತರಿಹಗಲಾ ।
ಸಿಂದಿಖಾನ್ಯಾಗ ಮಂದೆಷ್ಟು ಇರತಾರ
ಕುಡುದು ಬಿಟ್ರ್ಯ ಎಷ್ಟೊ ಹಾಲಾ ॥

ಕಮಾನ ಝುಟ್ಟ ಬಿಟ್ಟು ಕಾಲಾಗ ಬೂಟ ಮೆಟ್ಟು
ಕೋಟ ತೊಟ್ಟು ಮಾಡತಾರ ಒಣಡೌಲಾ ।
ಹೆಂಡ್ರು ಹಾದರ ಮಾಡಿದರ ಗಂಡ ರೊಕ್ಕ ಇಸ್ಗೋತಾನ
ಬರದೈತಿ ಅವರಿಗೇನು ಬಿಟ್ಟಿಲ್ಲ ॥

ಆನಿ ಹೋಗಿ ಉಳಿಯಿತಪ್ಪ ಬಾಲಾ ।
ನನ್ನ ಕಡೀ ನಿನ್ನ ಮೊದಲ ॥

ಉತ್ತಮರದು ಅಡಗಿತಪ್ಪ ಸಲ್ಲ ।
ಕೆಟ್ಟ ಮಂದಿದು ಎಷ್ಟು ಬೋಲ್ಬಲಾ ॥
ಈಗ್ಯೆತೆಪ್ಪ ಇಂಗ್ರೇಜಿ ಅಮಲಾ ।
ಗಂಡಸೊತ್ತುದು ಹೆಂಗಸರ ಕಾಲಾ ॥

ಹೆಣ್ಣ ಸರ್ಕಾರ ಇದು ಮಣ್ಣಾಗ ಹಾಕಲಿ
ಸವನ್ಮಾಡಿ ಇಟ್ಟಾದಪ್ಪಾ ಎಲ್ಲಾ ।
ಹೊಟ್ಟೆಯಂಥ ವೈರಿ ಯಾವ್ದೂದಿಲ್ಲ—
ರೊಟ್ಟಿಯಂಥ ಮೈತರು ಇಲ್ಲಾ ॥

೨ನೆಯ ಚೌಕ:—

ಹರೇಬಾಜ ಸಿಶೇಬಾಜ ರಾಂಡಬಾಜ
ಮೂರು ಬಾಜನಾಗ ಭಾಡಭಾಗಸ್ತಾನ ಬಿಡುದಿಲ್ಲ ।
ಭಾಗಿಸಿಂದ ಮುಂದ ಬೈಲಾಗಿ ನಿಂತಿತು
ಕೂಳ ಅಂಬುದು ಆದಿತು ಬೆಲ್ಲ ॥

ಆಣಿ ಮಾಡಿಮಾಡಿ ದೇಣಿ ತಂದಾರಪ್ಪ
ಬರಕೊಂಡವರ್ಹ್ಯೊಯ್ಕೊಂಡರೆಲ್ಲಾ ॥

ಕುಂಡಿ ತುಂಬಿದ ಮಂದಿ ಕೂಗಿ ದೇವರ ಹೇಳಿ
ಹಿಡಿಸಿಕೊಂಡಾರಪ್ಪ ತಮ್ಮ ಕಾಲ ।
ಮನಸ್ಯಾನ ಮೈಯಾಗ ದೇವರು ಬಂದರ
ಜಗಲಿ ಮ್ಯಾಗ ಒಂದು ಇರಲಾಕಿಲ್ಲ ॥

ಸತ್ತುಳ್ಳ ದೇವರು ಸಡಿಲಾದ ಕಾಲ ।
ಜೋಳ ಸುರುವಿ ತರತಾರಪ್ಪ ಬೆಲ್ಲ ॥
ಗಂಡ ನಟ್ಟ ಕಡದು ತಂದ ಜ್ವಾಳೆಲ್ಲಾ ।
ಬೆಲ್ಲ ಆಗೂದು ಪೂಜಾರಿ ಪಾಲಾ ॥

ಅಲ್ಲದ ಮಾತೀಗಿ ಬೆಲ್ಲ ಕಳೀಬ್ಯಾಡ್ರಿ
ಸತ್ತಮ್ಯಾಲ ತಿಳಿದೀತೆಲ್ಲಾ ।
ಹೊಟ್ಟಿಯಂಥ ವೈರಿಯಾವುದಿಲ್ಲ
ರೊಟ್ಟಿಯಂಥ ಮೈತರು ಇಲ್ಲ ॥

೩ ನೆಯ ಚೌಕ:—

ಪುಗಸಟ್ಟಿ ಪುರಾಣ ಓದಾಣ–ಕೇಳ್ಯಾಣ
ಪಾನ ಹರುದು ಪಸ್ನಾಸ ಮ್ಯಾಲ ।
ಕೆಟ್ಟಕೆಲಸ ಮಾಡಿ ಮುಟ್ಟಿ ಒದಿದವನ
ಕಟ್ಟಿಕಲ್ಲ ಒಂದು ಉಳಿಯಾಕಿಲ್ಲ ॥
ಹೊಗಳಿ ಹೊಗಳಿ ಮಸ್ತ ಬೊಗಳಿ ಸತ್ತವ್ರೋ
ಹುಗುಳುದು ಹುಟ್ಟೋದು ಬಿಟ್ಟಿಲ್ಲ ।
ಹುಟ್ಟಿ ಬಂದ ಬಳಿಕ ಹುಶಾರ ಇರಬೇಕು
ದೇಹ ಆಗಲಿ ಶಿವನ ಪಾಲಾ ॥

ಮೂರು ದಿನದ ಸಂತಿ ಮುನ್ನೋಡಿ ಮಾಡಿಕೊ
ಗರದಿ ನಡುದು ಮಧ್ಯಾನ ಮ್ಯಾಲ ।
ಸಂಜಿ ಆದ್ಹಾಂಗ ಒಂದು ಗುಂಜಿ ಇರಲಾಕಿಲ್ಲ
ಖಾಲೆಮಾರಿ ಆದಾವೊ ಚೀಲಾ ॥
ಜವಾ ಖರ್ಚು ಮಾಡತಾರ ಮ್ಯಾಲ ।
ಕಾಣೆದ್ರ ಕಟ್ಟತಾರ ಕಲ್ಲಾ ॥
ತೇರದಾಳ ಪ್ರಭು ನಿನ್ನ ಕೀಲಾ ।
ನರಕಾಗೂದು ಬಿಡಲಾಕಿಲ್ಲಾ ॥

**ಗೋಪಾಳ ದುರದುಂಡಿ** ಕರೆದು ಹೇಳತಾರ
ಅಂಜಬ್ಯಾಡ್ರಿ ಇರತೇವು ಬೆನ್ನಮ್ಯಾಲ ।
ಹೊಟ್ಟಿಯಂಥ ವೈರಿ ಯಾವುದಿಲ್ಲ
ರೊಟ್ಟಿಯಂಥ ಮೈತರು ಇಲ್ಲ ॥

---

# ಗಿಡ್ಡ ಪೋರಿ

೧ ನೆಯ ಚೌಕ:—

ಗಿಡ್ಡ ಪೋರಿ ಮುಡ್ಡ ಹsರಿ ಮುಕsರ್ ।
ಕಣ್ಣ ತಿರವಿ ಚಕ್ಕsರ್ ।
ಸಿಂತ ಸೀ ಸಕ್ಕsರ್ ।
ಉಳ್ಳತಾವ ಮುತ್ತಾ ।
ವಸ್ತ್ರಕಾರಿ ಪಟ್ಟಿ ವಾಲೀಗಂಟಿ ಮೂಗನಾಗ ಸಜಾಮು ಸತ್ತಾ ।
ಶ್ರೀಸಾಸಿಧಪ ಪಧನೀಸ ಸರಿಗಮು ನಾರಿ ನಿನ್ನ ಗತ್ತಾ ।
ನಮ್ಮ ಕಂಡು ಹೋಗಬ್ಯಾಡ ಚದsರಿ
ಓಡಿದ್ಹಾಂಗ ಬೆದsಳಿ ಕಾರ್ಹುಣಿವಿ ಎತ್ತಾ ॥

ಏನು ಮುಂಗಾರಿ ಮಳೀಹಾಂಗ ಸಿಡಲ್
ಬಿದ್ದಿತು ಖಡಲ್
ಎದೀ ಅಂತು ಧಡಲ್
ಆಗ ಸಿಂತ ಮೂಕಾ ।
ನಿನ್ನ ಸುರತ ಕಂಡು ಮೈ ಮರತ ಸಿಂತ ಮಾತಾಡದ್ಹಾರಿತ ತರಕಾ ।
ಮತ್ತ ಯಾದಹಚ್ಚಿ ಶೋಧಮಾಡಿ ಕೇಳತ ನಿನಗೊಂದು ಸೋಕಾ ॥
ಕುಡು ಘರsಸ ಮಾಡೂನು ಸರsಸ—
ಬೆಳ್ಳ ಬೆಳತಸಕಾ ॥

ನಿನ್ನ ಎದಿ ಮ್ಯಾಲ ಕುಚಗಳು ಬಗsರಿ
ಸಿಂತsವು ನಿಗsರಿ
ಗಂಡೆರಳಿ ಚಿಗsರಿ
ಹಾಂಗ ನಿನ್ನ ರೂಕಾ ।
ಸಣ್ಣಶಾಲಿ ಉಟ್ಟು ಓಣಿಗುಂಟ ಪೋರೀ ಎಷ್ಟು ಮಾಡತಿ ಮುರಕಾ ।
ನೀರ ಥೆರೀ ಹಾಂಗ ಸಿಲಗೀ ಒದ್ದು ನಾರಿ ನಡಿವುದು ನಾಜೂಕಾ ।
ಆನಿ ನಡಿದಾಂಗ ಮಾಡಿ ಸಿಂಗಾರ—

ನೈಮ್ಯಾಲ ಬಂಗಾರಽರ ಬಿದ್ದಾಂಗ ಬೆಳಕಾ ॥
ನಿನ್ನ ಬೆಲಿ ಹೇಳ ಬಾಲೀ ಎಷ್ಟರಽದ
ಹೋಗಬ್ಯಾಡ ಮುರಽದ
ವಸ್ತ್ರ ಬಂಗಾರಽದ
ತಗೋ ನಿನ್ನ ಠೂಕಾ ।
ಇದಕನುಮಾನ ಯಾಕಿನ್ನ ಬಿಡು ನಿನ್ನ ಮನಸದಾನ ತೊಡಕಾ ।
ಈ ಜನ್ಮಕ ಬಂದ ಮೂರದಿನ್ದ ಸಂತೀ ಮಾಡೂನು ಬಾ ಖಡಕ ।
ಈ ಹರೆಯು ಹೋದ ಮ್ಯಾಲ ಸರಽದ–
ಅಲ್ಲಿಂದ ಬರಽದ ಈಗಿನ ಧಮುಕ ॥

ಈ ಭಾರದಾಗ ಕುಡುಕೈಯ್ಯ ಒಲ್ಲ ಅನಬ್ಯಾಡ–
ಒಲ್ಲ ಅನಬ್ಯಾಡ ।
ನಡಿ ರಂಗಮಾಲದಾಗ ಬಂದ ಇರುವ್ಹೊ ನನ್ನ ಜೋಡ–
ನನ್ನ ಜೋಡ ।
ಯಾವ ಮಾತಿಂದೇನು ಕೊರತಿಲ್ಲ ಮನ್ಯಾಗ ಉಂಡಾಡ–
ಉಂಡಾಡ ।
ಸ್ವತಃ ನಡಿಸಿ ಕುಡತ ನನ್ನ ಜೀವದ ಮ್ಯಾಲ ನೀಕಾಡ–
ನೀ ಕಾಡ ।

ಹೀಂಗ ಪೋರಿಗಿ ಹೇಳ್ಯಾನ ಬೆಳಽಸಿ
ಒಳಿತಾಗಿ ತಿಳಽಸಿ
ತಾಯಿ ತಂದಿ, ಗಳಽಸಿ
ಇಟ್ಟ್ಯಾರ ಮಸ್ತಾ ।
ಮತ್ತ ದೌಲತ್ತ ನಾವು ಕುತ್ತ ಉಣ್ಣೂನಂತ ಒಂಗಾರ ತುತ್ತ ।
ಶ್ರೀ ಸಾನೀಧಪ ಪಧನೀಸ ಸರಿಗಮ ನಾರೀ ನಿನ್ನ ಗತ್ತ ।
ನಮ್ಮ ಕಂಡು ಹೋಗಬ್ಯಾಡ ಚದಽರಿ
ಒಡಿದಾಂಗ ಬೆದಽರಿ
ಕಾರ್ಹುಣ್ಣಿವಿ ಎತ್ತಾ ॥

೨ ನೆಯ ಚೌಕ—

ಯಾಕೋ ಗಂಡುಳ್ಳ ಬಾಲೇರಿಗಿ ಹಟsಕ್
ಕೇಳತಿ ಕೀಟsಕ್
ಅವನ ಮ್ಯಾಲೆ ಚಟsಕ್
ಮುರದಾಳ ಬಟ್ಟಾ।
ನನ್ನ ಪುರಷಹಾನ ದುರುಷ ಖಾಲೆ ಇರಸ ಬೆಳಸಬ್ಯಾಡ ತಂಟಾ।
ನನ್ನ ಸೋದರ ಮಾವ ಕೆಟ್ಟಾಂವಾ ನಿನ್ನ ಜೀವ ಮಾಡ್ಯಾನು ಚಟ್ಟಾ।
ನಿನ್ನ ಮನದಾಗ ನೋಡೊ ತಿಳಿsದ-
ಕಾಲ್ಬಿಡದೆಳsದ ಕಿತ್ತ್ಯಾರೊ ಜುಟ್ಟಾ॥
ಕಂಷಕಂಡಲ್ಲಿ ತರಬತಿ ಸಂದ್ಯಾಗ
ನಾನ ಕಳದೀ ಮಂದ್ಯಾಗ
ಹಾಕಸೇನು ಬಂದ್ಯಾಗ
ಇದ್ದೀ ಮರಸೋಟ।
ಖಾಲೆ ಭಂಡಮಾಡಿ ದಂಡಕೊಟ್ಟೀ ಹೋಂಡ ಇದ್ದಿ ಅಡಮುಟ್ಟಾ।
ಈ ಸರಕಾರೊಂದು ಪರಕಾರಾಡ ಕಾಣಸ್ತ್ಯಾರು ತುರಂಗಘಾಟ।
ನಿಸಗ ಬೇಡಿ ಹಾಕಸೇನು ಒsಯ್ದು-
ಅಲ್ಲಿಂದ ಕೈsದ ಭೋಗಸುದು ಕಷ್ಟಾ॥
ಭಾಳ ಕೆಟ್ಟಾದ ಹೆಣ್ಣಿನ ಇರsಸ
ಲಂಕಾsದರsಸ
ಮಂಡೋದರಿ ಪುರುsಷ
ರಾವಣ ದುಷ್ಟಾ।
ವೈಗಿ ಬೂದಿ ಧರಿಸಿ ಸಾಧೂ ಆಗಿ ಸನ್ಯಾಸಿ ರೂಪs ತೊಟ್ಟಾ।
ಅಂವಾ ಕಪಟದಿಂದ ಹೋದ ಅಲ್ಲಿ ಸೀತಾನ ಬಲ್ಲಿ ಬೇಡಿದಾ ಹಿಟ್ಟಾ।
ಮಂಡಲದೊಳಗಿದ್ದರೇನು ಅವಗ ಕಿಮ್ಮತ್-
ಹೊರಗ ಒರೂಸs ಮಾತ ಎತ್ತಗೊಂಡು ಹೊಂಟಾ॥
ಸೀತಾನ ಸಲುವಾಗಿ ಲಂಕಾ ಸುಟ್ಟ ಮಾರೂತಿ-
ಮಾರೂತಿ।

ಭಾಳಮಂದಿ ಮಡೀತೋ ಮುಣಗಿ ಹೋಯ್ತು ಸಂಪತಿ-
ಸಂಪತ್ತಿ ।
ಕೌರವನ ಹೊಡಿಸಿಬಿಟ್ಳಾಳ ಪಾಂಡವರ ದ್ರೌಪತಿ-
ದ್ರೌಪತಿ ।
ಭೀಮಸೇನನದ್ದು ಇತ್ತು ಒಳೆ ಧಸಕ
ತುಳದಾನ ಕಚಕ
ಆವಾಗ ಕೀಚಕ
ಸೊಕ್ಕ ಮುರದು ಸತ್ತಾ ।
ಈ ಹೆಣ್ಣಿಗಾಗಿ ಮಣ್ಣಾಗೂಡಿ ಮುಣಗಿ ಹೋಗ್ಯಾವ ದೌಲತ್ತಾ ।
ಶ್ರೀ ಸಾನಿಧಪ ಪದನಿಸ ಸರಿಗಮ ನಾರಿ ನಿನ್ನ ಗತ್ತಾ ।
ನಮ್ಮ ಕಂಡು ಹೋಗಬ್ಯಾಡ ಚದರಿ
ಓಡಿದಾಗ ಬೆದರಿ
ಕಾರ್ಬುಣ್ಣಾವಿ ಎತ್ತಾ ॥

೩ನೆಯ ಚೌಕ:—

ಪೋರಿ ಹೇಳಬ್ಯಾಡ ನನಗೊಂದು ಅಕಲಾ
ಕೃಷ್ಣನ ಗೋಕುಲ
ಒಳಗಿನ ದಾಖಲ
ಕೇಳ ಶ್ಯಾಣ್ಯಾರಿಗಿ ।
ಆ ಶ್ರೀಹರಿ ಶರಾಸೂರಿ ಮಾಡಿದಾ ಗೌಳಗೆರಿಗಿ ।
ಅಂವಾ ಹದಿನಾರು ಸಾವಿರ ಭೋಗಿಸಿದಾ ಗೋಪ್ಯಾರಿಗಿ ।
ನೀ ತಗೀ ಬ್ಯಾಡ ಖಾಲೇ ಕುಸಲ-
ಮಾತಿನ ಹಾಸಲ ಕೇಳದ ತುಸು ತಿರಗಿ ॥
ನಿನ್ನ ಮಾವಂದು ಇಟ್ಟೆದಿ ಹಿಮ್ಮತ
ಅವಂದೇನು ಕಿಮ್ಮತ್ತ
ಮಾಡೂನು ಬಾ ಗಮ್ಮತ್ತ
ಇಂದ ರಾತರಿಗಿ ।

ಶಿವ ಹುಡಕ್ಯಾಡಿ ಸಮುಜೋಡಿ ಗಂಟುಹಾಕ್ಯಾನ ಇಬ್ಬರಿಗಿ ।
ನಿನ್ನ ದೈವ ಭಾಳ ಸವ್ವವೊಳ ಹಾಂಗಂತ್ತ ದೊರದೆ ನಿನ್ನ ವಾರಿಗಿ ।
ನಾ ಎಷ್ಟು ಹೇಳಲಿ ಹುಚ್ಚೀಗಿ
ಅಯ್ದು ಹುವ್ವ ಹೆಚ್ಚೀಗಿ ಹಾಕ ದೇವರಿಗಿ ॥

ನಿನ್ನ ಗಂಡಂದು ಹೇಳಬ್ಯಾಡ ಬಿರಸದ
ಅಂವಾ ಅಲ್ಲ ಮುರಸದ
ಸುಂಗೇನ ಅರಸದ
ಅದು ಯಾ ಭಾರಗಿ ।
ಇಷ್ಟು ದಮ್ಮ ಬ್ಯಾಡ ಸುಮ್ಮ ಬಾ ಅಂಜ ಬ್ಯಾಡ ಯಾರಿಗಿ ।
ನಿನ್ನ ಕೊಳ್ಳ ಆಣಿ ಸುಳ್ಳ ಅಲ್ಲ ಕೇಳ ಊಬೆ ಊರೀಗಿ ।
ನಾ ಸುಳ್ಳ ಹೇಳೂದಿಲ್ಲ ಒಡಾಯಿ–
ಮಾಡೇವು ಲಡಾಯಿ ಜಗಳ ಮಾರೀಗಿ ।

ನೀ ಮಾಡಿ ನೋಡ ಹಾದರ ಅಂಬುದು ಹಸಿಹಾಲ–
ಹಸಿಹಾಲ ।
ತಿಂದಾಂಗ ಸುಲದ ಕೆರಿ ಕರಿಕಬ್ಬ ಭಾಳ ಸವಿಬೆಲ್ಲ–
ಸವಿಬೆಲ್ಲ ।
ಅಮೃತಫಲ ಜೇನತುಪ್ಪ ಇದರ ಮುಂದಲ್ಲ–
ಇದರ ಮುಂದಲ್ಲ ।

ಏನು ಮಾಯಿಸಕಾಯಿ ಬಂತ ಪಾಡಸಕ
ಗಿಣೀ ಕೂತ ಗಿಡಸಕ
ಕಡದು ಒಗೀತು ಬುಡಸಕ
ಕೊಳತೀತು ವ್ಯರ್ಥ ।
ಹಾಂಗ ಕೊಳತುಹೋದೀ ಎಳತ ಯಾಕ ಹಚ್ಚಿದಿ ಮಾಡ ಖೂನ
ಗುರತ ।
ಶ್ರೀ ಸಾನೀಧಪ ಪಧನಿಸ ಸರಿಗಮ ನಾರಿ ನಿನ್ನ ಗತ್ತಾ ।
ಸಮ್ಮ ಕಂಡು ಹೋಗಬ್ಯಾಡ ಚದರಿ

ಓಡಿದಾಂಗ ಬೆದರಿ
ಕಾದ್ದುಣ್ಣಾವಿ ಎತ್ತಾ ॥

**೪ನೆಯ ಚೌಕ:—**

ಬಾಲಿ ತಿಳದಾಳೊ ತನ್ನ ಮನಸಕ
ನನ್ನ ಒಗತನಕ
ಗರತೆಂಬು ಗುಣಕ
ಹಚ್ಚ ಬ್ಯಾಡ ಧಕ್ಕಿ ।
ಬರೂ ರೀತಿಯಿಂದ ರಾತರ್ಯಾಗ ಬಂದು ಹೋಗೋ ಮಂದಿ ಅಂಜಿಕಿ ।
ನನ್ನ ಮಾವ ಮುಪ್ಪಿನವ ಕಣ್ಣುಹೋಗಿ ಕುಂತಾಳ ಅತ್ತಿ ಮುದಕಿ ।
ವ್ಯಾಪಾರಕ ಹೋಗ್ಯಾನ ಮನಿಪುರುಷ-
ಮಾಡೂನು ಹರನ ನಮ್ಮ ರಾಜೀಕಿ ॥

ಪೋರಿ ನಿಂತಾಳ ಗೆಣಿಯನ ಇದರ
ಹಿಡದಾಳ ಪದರ
ನನಗಿಲ್ಲ ಆಧಾರ
ಪರದೇಶಿ ಹಕ್ಕಿ ।
ನನಗ ಪಿಂಜರದಾಗ ಹಾಕಿ ಒಯ್ದು ಸಾಕಿ ಮಾಡಂತಾಳ ಜೋಕಿ ।
ಅವನಿಗ್ಹೀಂಗಂದು ಮನೀಗಿ ತಂದು ಕುಂಡ್ರೆಂತ ಕೊಟ್ಟಾಳ ಚೌಕಿ ।
ಪಂಚಾಮೃತ ಮಾಡ್ಯಾಳ ಅಡಿಗಿ-
ಹಾಳ ಸಣ್ಣಹುಡಿಗಿ ಇಲ್ಲ ಬ್ಯಾಸರಕಿ ॥

ಗೆಣ್ಯಾನಗೀಸಾಗ ಹಾಲತುಪ್ಪ ಹಣಿಸಿ
ಮುಂದ ಕೂತು ಉಣಸಿ
ಮ್ಯಾಲ ಎಣಿ ಎಣ್ಣೆಸಿ
ಕೊಟ್ಟಾಳ ಎಲಿಅಡಿಕಿ ।
ಆಕಿ ಅಬೀರ ತಂದು ಅಷ್ಟಗಂಧ ಮೈಗೆಲ್ಲಾ ಹಚ್ಚ್ಯಾಳ ತಿಕ್ಕಿ ।
ಸಣ್ಣ ಕುಬಸಿನ ಗಂಟಬಿಚ್ಚಿ ಎದಿಗ್ಹಚ್ಚಿ ಹೊಡದಾಳ ತೆಕ್ಕಿ ।

ಭೋಗ ಕುಡತಾಳ ಗುಲಗುಲಽಸಿ
ಅವನಿಗಿ ಭುಲಾಸಿ ಬಿಟ್ಟು ಆಕಿ ॥

ಮನಸಂತೋಷಾಯ್ತು ಬೆಳಗಿದಂಗ ಮಳಿಕುಟ್ಟಿ–
ಮಳಿಕುಟ್ಟಿ ।
ಸುತ್ತ ರಾಜ್ಯದಾಗ ಹಲಸಂಗಿ ಊರ ಕರಿಕೋಟಿ–
ಕರಿಕೋಟಿ ।
ಗುಡುಬಾಳು ವಸ್ತಾದರ ಆ ಕಡಿ ನಡಗಟ್ಟಿ–
ನಡಗಟ್ಟಿ ।
**ಸಿದ್ದು–ಶಿವಲಿಂಗ** ಹಾಡುದು ವರಽಸಿ
ಧನಿ ಎತ್ತರಽಸಿ
ನುಡಿ ಕತ್ತರಽಸಿ
ಸುರದಂಗ ಮುತ್ತ ।
ಶೇಕು ಬಾವಶಾ ಔಂದಶ ಹರದಾಸಿ ಕೇಳಿ ಅವ ಮರ್ತ ।
ಶ್ರೀ ಸಾನಿಧಪ ಪಧಸಿಸ ಸರಿಗಮ ನಾರಿ ನಿನ್ನ ಗತ್ತ ।
ನಮ್ಮ ಕಂಡು ಹೋಗಬ್ಯಾಡ ಚದಽರಿ–
ಓಡಿದಾಂಗ ಚಿದಽರಿ
ಕಾರ್ಹುಣ್ಣಿವಿ ಚಿತ್ತಾ ॥

———

# ಭೀಷ್ಮ ಪರ್ವ

೧ನೆಯ ಚೌಕ:—

ಜನಮೇಜಯನ ಮುಂದ ವೈಶಂಪಾಯ್ನನ ಕತಿ–
ಅರಸ ಕೇಳಿ ತೂಗಿದ್ದ ತಲಿ ।
ಯುದ್ಧಾಗಿ ಹೋಯ್ತು ದ್ವಾಪಾರಸಲಿ ।
ಆ ಭೀಷ್ಮ ಲಡಾಯಿ ಮಾಡಿದ್ದ ಕೊಲಿ ।
ಪಾಂಡು ಪ್ರತಾಪದೊಳಗ ಆದ ಕೌತುಕಾ–
ಏಷ್ಟಂತ ನಾ ವರ್ಣಿಸಲಿ ।
ಒಂದು ಬಾಯೀಲಿ ॥

ಧರ್ಮ ದುರ್ಯೋಧನಗ ಪರ್ಮಸೊಕ್ಕಿ ಒಳಿ–
ತಾಗಿ ಹಿರಸ ಬಿದ್ದಿತ್ತು ತಿಡಿ ।
ಪರಮಾತ್ಮ ಆದ ಪಾಂಡವರ ಕಡಿ ।
ಪೃಥಿವಿ ಭೂಭಾರ ಇಳಸೂನು ಸಡಿ ।
ನರನಾರಾಯಣ ಅವತಾರ ತೊಟ್ಟು–
ಅರ್ಜುನ ಕೃಷ್ಣ ಇಬ್ಬರು ಕೂಡಿ ।
ಮಸಲತ್ತ ಮಾಡಿ ॥

ಯುದ್ಧ ಮಾಡೂದನು ಸದ್ಯ ನೇಮಿಸಿತಾ–
ಉದ್ದ ತಂದು ರಣಗಂಭ ಹೂಡಿ ।
ಆ ಭೀಷ್ಮ ಇದ್ದ ಬೆಂಕ್ಯಾಯ ಕಿಡಿ ।
ದಂಡ ತಯಾರಾಗಿ ಬಂತು ಎರಡು ಕಡಿ ।
ರಣಗಂಬದ ಪೂಜಿ ಮಾಡಿ ಹಾಕಾರಿ–
ಹೊಡದ್ಹೇಳತಾನ ಖಡಾಮುಡಿ ।
ಹಿಡಿಲಿಲ್ಲ ಭಿಡಿ ॥
ತಮ್ಮ ದಂಡಿನ ಕಡೀ ಮಾರ್ಯಾಗಿ ಹೊಡೆದಾ ಹಾಕಾರಿ ।
ಹೇಳತಾನ ಒದರಿ ॥

ಪಾಂಡವರ ಸಾರಥಿ ಅನುಕೂಲ ಆದಾ ಕೈವಾರಿ ।
ತಾನೆ ಗಿರಿಧಾರಿ ॥
ಜಯ ಪ್ರಾಪ್ತಿ ಆದ ಪಾಂಡವರಿಗಂತ ಬ್ರಹ್ಮಚಾರಿ ।
ಹೇಳಿದಾ ಸಾರಿ ॥

ಇಂದ ಬೇಕಾರ ಹೋಗಿರಿ ಭ ಡ ಡ ಡ–
ಪಾಂಡವರ ಕಡಿ ಹೊಂಟ । ಹೊಂಟ ನೀವು ಹೊಂಟ ॥
ರಥ ಏರಿ ಹೊಡದಾ ಘ ಡ ಡ ಡ–
ದಂಡಿನೊಳಗ ಭಂಟ । ಭಂಟ ತಾನು ಭಂಟ ॥
ಮೀಸಿ ಹುರಿಯುಹಾಕಿ ಖ ಡ ಡ ಡ–
ಬಾಣ ಜಗ್ಗೀ ಬಿಟ್ಟಾ । ತಾನು ಬಿಟ್ಟಾ ॥

ಪೈಲಿ ಪ್ರಥಮುದಾಗ ಭೀಷ್ಮ ಲಡಾಯಿಗಿ–
ಸೈನ್ಯದೊಳಗ ಇದ್ದಾಂಗ ಹುಲಿ ।
ಬಾಣಽದ ಮಂಟಪ ಹಾಕಿದ್ದ ಬಲಿ ।
ಸೂರ್ಯ ಮುಣಗಿದಾಂಗ ಬಿತ್ತ ಕತ್ತಲಿ ।
ಪಾಂಡುಪುತ್ರಾಪದಾಗ ಆದ ಕೌತುಕಾ–
ಎಷ್ಟಂತ ನಾ ವರ್ಣಿಸಲೀ ।
ಒಂದು ಬಾಯಿಲಿ ॥

೨ ನೆಯ ಚೌಕ:—

ಮುತ್ಯಾನ ಪಾದಕ ಬಾಣ ತಗದು ಅರ್ಜುನ–
ಬಿಟ್ಟಾನ ನೋಡಿ ನಿರತಾ ।
ಅವಾ ನಮಸ್ಕಾರ ಮಾಡಿದಾ ಪಾರ್ಥ ।
ಭೀಷ್ಮ ಆಶೀರ್ವಾದ ಕೊಟ್ಟಾನ ಪೂರ್ತಾ ।
ವೀರ ಖರೇ ರಣಶೂರ ಫಾಲ್ಗುಣಾ–
ಹತ್ತು ಹೆಸರಿನವ ಸಽಮರ್ಥ ।
ಇಲ್ಲ ನಿನ್ನ ಹೊರತ ॥

ಪಾರ್ಥ ಅರ್ಜುನನ ಸಾರಥಿ ಕೃಷ್ಣ ಆಗಿ–
ಮುಂದ ಕೂತು ನಡಿಸ್ಯಾನ ರಥಾ ।
ಮ್ಯಾಲ ಧ್ವಜಸ್ತಂಭದಲಿ ಹಣಮಂತಾ ।
ಕೂತು ಹೂಂಕಾರ ಮಾಡಿದ ವಾಯುಸುತಾ ।
ವಿಷ್ಣು ಸಾಂಬನಾಂಗ ಸರಿಯು ಸಮಾಸಿಕಾ–
ಭೀಷ್ಮ ಇದ್ದಾ ರಣ ಪಂಡೀತಾ ।
ಪಂಡುರಾಯನ ಪಿತಾ ॥

ತ್ವಾಳಾಗಿ ಹೊಕ್ಕ ಅರ್ಜುನ, ಮಾಡಿ ಕುರಿಹಿಂಡ ।
ಕೌರವರ ದಂಡ ॥
ಗರ್ಜನೆ ಮಾಡಿ ಬಾಣ ಬಿಟ್ಟು ಹಾರಿಸಿದ ರುಂಡ ।
ಆಡಿದಂಗ ಚಂಡ ॥
ಆ ಭೀಮ ಹೊಡೆದ ಹಾಕಾರಿ ಗದಾ ಎತ್ತಗೊಂಡ ।
ಹೊಕ್ಕಾನಂವಾ ಪುಂಡ ॥

ಆನಿ ಸೊಂಡಿ ಹಿಡದು ಗ ರ ರ ರ–
ತಿರವಿಕೇರಿ ಒಗದಾ । ಒಗೆದಾ ತಾ ಒಗೆದಾ ।
ಕಾಲ ಮುಂದಿ ಹಿಡಿದು ದ ರ ರ ರ–
ಎಳದು ಭೀಟಿ ಜಿಗಿದಾ । ಜಿಗಿದಾ ತಾ ಜಿಗಿದಾ ॥
ಸಿಟ್ಟಿಗೇರಿ ಭೀಷ್ಮಕ ರ ರ ರ–
ಹಲ್ಲ ತಿಂದು ಬಾಣ ತಗೆದಾ । ತೆಗೆದ ತಾ ತೆಗೆದಾ ॥
ಹೊಡದ ಶಪಾ ಮಾಡಿ ಕೆಡವಿದ್ದ ರಣದಾಗ–
ಹೆಣಕ ತಟ್ಟಿದಾವು ರಥದ ಗಾಲಿ ।
ನೆತ್ತರದ ಹರಿದಿತರಿ ಕಾಲ್ವಲಿ ।
ತಗಲಾಕ ಹೊಂಟಿತರಿ ನದಿಯು ಸೆಲಿ ।
ಪಾಂಡುಪ್ರತಾಪದಾಗ ಆದ ಕೌತುಕಾ–
ಎಷ್ಟಂತ ನಾ ವರ್ಣಿಸಲಿ ।
ಒಂದು ಬಾಯೀಲಿ ॥

**೩ನೆಯ ಚೌಕ:—**

ದೇವರಗೂಡ ನೇಮ ಮಾಡಿ ಆ-
ಭೀಷ್ಮ ಖಡತರ್ಹಾಕಿದ್ದ ಪಣ ।
ಚಕ್ಕರ ಹಿಡಸೇನ ಸುದರ್ಶನ ।
ಹಿಡಿಲಾಕ ಇಲ್ಲಂದ ಮೇಘವರ್ಣ ।
ನನ್ನ ಇದರಿಗೀ ಇನ್ನೇನು ಟಿಕಾಶ್ಯಾ-
ಸಣ್ಣ ಕೂಸ ಭಾಳ ಅರ್ಜುನಾ ।
ಅಂದು ಬಿಟ್ಟಾ ಬಾಣಾ ॥
ಗಂಗಾಕಂದ ಹೀಂಗಂದು ಹೊಡದ-
ಕೆಡವಿದ್ದಾ ಏಟಿಗೊಂದೊಂದು ಹೆಣಾ ।
ಮೂರ್ಛಿ ಬಂದು ಪಾರ್ಥ ಮುಚ್ಯಾನ ಕಣ್ಣಾ ।
ಆಗ ಹೊರಳಿ ನೋಡಿದಾ—ನಾರಾಯಣ ।
ಘಾತಾಯಿತಂತ ತಗೊಂಡು ಚಕ್ಕರಾ-
ಭೀಷ್ಮ ಹಿಡದಾ ದೇವರ ಚರಣಾ ।
ಇನ್ನ ತಗೋ ಪ್ರಾಣಾ ॥
ಪಾಂಡವರ ಸೈನ್ಯದಲಿ ಶ್ರೇಷ್ಠಾದ—ಕೃಷ್ಣ,-
ವರ್ಣನ ಮಾಡಿದಾ ಭೀಷ್ಮನ ಗುಣಾ ।
ಪಾಂಡವರೈದು ಮಂದಿ ಮ್ಯಾಲ ಇಟ್ಟಾ ದಯ ಕರಣಾ ।
ನೀ ಮಾಡೂ ಇನ್ನ ಅವರ ಸಂರಕ್ಷಣಾ ।
ಪರಶುರಾಮುಗ ಸರಿಸಿ ಬಿಟ್ಟಿದಿ-
ನಿನ್ನ ಗುರುವನ ಕಾಣಾ ಕಾಣಾ ।
ಆಗಿ ನಿಪುಣಾ ॥

ಸಾವಧಾನ ಆಗಿ ಅರ್ಜುನಗ ಬಂದಿತೊ ತಾಪ ।
ತಗೊಂಡಾನ ಚಾಪ ॥

ದೇವರ ಅಂದ ಭೀಷ್ಮಾಚಾರಿ ಹೊಡದಾ ಬಂದು ಧುರಪ ।
ದಂಡ ಬಿತ್ತು ತೆಪ್ಪ ॥

ರಣದೊಳಗ ಯುಽಶ ಇಲ್ಲೆನೊ ತಟ್ಟಿತೊ ಪಾಪ ।
ಮುಂದಿ ಆಯ್ತು ಖಪ್ಪ ॥
ಕಿರೀಟಿ ತುಟಿಕಚ್ಚಿ ಧ ಸ ಸ ಸ–
ಧನುಷ್ಯ ಎತ್ತಿ ಹಿಡಿದಾ । ಹಿಡಿದ ತಾ ಹಿಡಿದಾ ।
ಅಗಳಾಡಿಸಿಕೇರಿ ಘ ಣ ಣ ಣ–
ಚಾಪಿನ ಘಂಟಿ ಬಡಿದಾ । ಬಡಿದ ತಾ ಬಡಿದಾ ॥
ಆ ದಿನ ಎರಡು ಕೈಲೆ ಸ ಣ ಣ ಣ–
ಬಾಣ ಜಗ್ಗಿ ಹೊಡಿದಾ । ಹೊಡಿದಾ ತಾ ಹೊಡಿದಾ ॥

ಶರ್ತಲಡಾಯಿ ಮಾಡಿ ಬೆವತ ಮುಕುಟ–
ಹಸಿರ ಸೀರ ಬಂತು ಕಣ್ಣೀನ ಬಳಿ ।
ತಗೆದೊಗೆದ್ರೊಳಗ ಕೆಲಸಾಯಿತಲ್ಲಿ ।
ಭೀಷ್ಮ ಹತ್ತು ಸಾವಿರ ಹಾರಿಸಿದ್ದ ತಲಿ ।
ಪಾಂಡುಪ್ರತಾಪದಾಗ ಆದ ಕೌತುಕಾ–
ಎಷ್ಟಂತ ನಾ ವರ್ಣಿಸಲಿ–
ಒಂದು ಬಾಯಿಲಿ ॥

೪ ನೆಯ ಚೌಕ:—

ಚಿಂತಿಯೊಳಗ ಗೋತಾಸಿ ಕುಂತ–
ಅರ್ಜುನಗ ಹೇಳತಾನ ಅಣ್ಣ ಧರ್ಮಾ ।
ಹಂಕಾರ ಬಿಡ್ರಿ ಮನದಾನ ಹಮ್ಮಾ ।
ಮುತ್ಯಾಗ ಶರಣು ಹೋಗೂನು ಸುಮ್ಮಾ ।
ಮಾತ ಮನಸಿಗೀ ತಂದು ತಲಿಯುದೂಗಿ–
ಹೇಳತಾನ ಪರಮಾತ್ಮಾ ।
ನಡಿರೆಂದ ಭೀಮಾ ॥
ರಾತ್ರೀಕಾಲಕ ಆರು ಮಂದಿ ಕೂಡಿ–
ಹೊಂಟು ಹೋದರವರು ಆಗಿ ಜಮ್ಮಾ ।

ಕೂತಿದ್ದಾ ಥೇರೆದಾಗ ಭೀಷ್ಮಾ ।
ನಾಮಸ್ಮರಣೆ ಮಾಡತಿದ್ದ ರಾಮ ರಾಮಾ ।
ನಮಸ್ಕಾರ ಮಾಡಿ ಪಾಂಡವರು ಅಂತಾರ–
ಉದ್ಧಾರಾಯಿತರಿ ನಮ್ಮ ಜನ್ಮಾ ।
ಸರಿದಿತು ಕರ್ಮಾ ॥

ಬಿದ್ದು ಪಾದಕ ಎದ್ದು ಹೇಳತಾರ–
ನೀವು ಲಡಾಯಿ ಮಾಡಿದಿರಿ ಶಮ ।
ಗಟ್ಯಾಗಿ ಹಿಡಿದಿರಿ ಒಂದೇ ನೇಮ ।
ನಮ್ಮ ದಂಡ ಖಪ್ಪ ಆಗಿ ಹೋಯ್ತ್ರಿ ಸೀಮಾ ।
ಯಶ ಅರ್ಪಣೆ ಮಾಡಿರಿ ನಮಗ–
ಹೇಳಬೇಕ್ರಿ ಲಡಾಯಿ ವರಮಾ ।
ಒಳಗಿನ ಹೊಲಮಾ ॥

ಅಡಿವೆರ್ಗ ಆಗಿ ಆ ಭೀಷ್ಮ, ದೇವರಿಗಿ ಅಂದಾ ।
ಬಾಲ ಮುಕುಂದ ॥
ನನ್ನ ಬಾಳ್ಯಾಗಳನ ರಕ್ಷಣಮಾಡು ಗೋವಿಂದ ।
ದೇವಕೀ ಕಂದಾ ॥
ಯುಶಕುಡತ ಶಿಕಂಡಿ ಮಾಡಿ ಬಿಡತ ಅರ್ಜುನನ ಮುಂದ ।
ಹೊಡಿರಿ ನಮಗಂದಾ ॥

ಇಷ್ಟು ಮಾತ ಕೇಳಿ ಹಿ ರಿ ರಿ ರಿ–
ಹಿಗ್ಗಿ ಧರಮೆದ್ದಾ । ಎದ್ದ ತಾ ಎದ್ದಾ ॥
ಅರ್ಜುನಾ ಬಂದ ಭಿ ರಿ ರಿ ರಿ–
ಶಿಕಂಡಿ ಮುಂದ ಇದ್ದಾ । ಇದ್ದ ಮುಂದಿದ್ದಾ ॥
ಧನಂಜಯ ಹೊಡೆದಾಗಿ ರಿ ರಿ ರಿ–
ಗಿರಕಿ ಬಂದು ಬಿದ್ದಾ । ಬಿದ್ದ ಭೀಷ್ಮ ಬಿದ್ದಾ ॥

ಹತ್ತು ದಿನಾ ಹೀಂಗ ಮಾಡಿ ಲಡಾಯಿ–
ದೇಹ ಬಿಟ್ಟಾ ತನ್ನ ಇಚ್ಛಾದಲಿ ।

ಶರಪಂಜರ ಮ್ಯಾಲ ಬಿದ್ದಾ ಅಂತರಲಿ ।
ತೂಗಾಡಿ ಝೋಲಿ ತಿಂದಿತೊ ತಲಿ ।
ಪಾಂಡು ಪ್ರತಾಪದಾಗ ಆದ ಕೌತುಕಾ–
ಎಷ್ಟಂತ ನಾ ವರ್ಣಿಸಲಿ ।
ಒಂದೆ ಬಾಯಿಲಿ ॥

೫ ನೆಯ ಚೌಕ:—

ಎರಡೂ ದಂಡಿನಾಗ ಆಕ್ರಾಂತಾಯಿತಂತಾರ–
ಯಾರು ಇಲ್ಲ ಇವನ ಸರಿ ।
ಇಂದ ನೆಲಕ ಬಿದ್ದ ದಂಡೀನ ಧೋರಿ ।
ಭೀಷ್ಮಪರ್ವದೊಳಗ ಆಗಿಹೋತ್ರಿ ಸೂರಿ ।
ಶಂತನುರಾಯನ ಸುತ ಅಂದ ದೇವರಿಗಿ–
ಲಗು ಮಾಡಿ ದುರ್ಯೋಧನಗ ಕರಿ ।
ತಲಿಗಿಂಬ ತರ್ರಿ ॥

ಕೇಳಿ ದುರ್ಯೋಧನ ಅರಳಿಲೋಡ ತಂದಾ–
ಸೀರು ತುಂಬಿ ಬಂಗಾರ ಝಾರೀ ।
ಹಾಸೀಗಿ ತಕ್ಕ ಲೋತಲ್ಲ ಸರಿ ।
ಕಣ್ತೆರದು ನೋಡಿದ ಅರ್ಜುನನ ಮಾರಿ ।
ಬಾಣದ ತಿಗಟೀ ಕಟ್ಟಿಕೊಟ್ಟಾನ–
ಆವಾಗ ಮಾತ ಸ್ವರಾಸರಿ ।
ಕೂಡಿತರಿ ॥

ಶ್ವೇತವಾನ ಹೊಡದಾನ ಬಾಣ–
ಪಾತಾಳದಂದು ತಗದಾನ ಝರಿ ।
ಪುಟಿದೀತೂ ಮ್ಯಾಲ ಕಾರಂಜಿ ಪರಿ ।
ಬಾಯಾಗ ಬಿತ್ತು ನೀರಿನ ಧಾರಿ ।

ದುಯೋ೯ಧನ ಜಂಬೂಕ ಸಮಾನ–
ಸೀನೆ ಒಬ್ಬ ಸಿಂಹನ ಮರಿ ।
ಅಂದಾ ಭೀಷ್ಮಾಚಾರಿ ॥

ಯಾರೂ ಸುಟ್ಟಿರಬಾರ್ದು ಅಲ್ಲಿ ಸುಡು ಅಂತ ಹೇಳಿದನಾ ।
ವಚನ ಕೇಳಿದಾ ಕೃಷ್ಣನ ॥

ಎಂಟು ದಿನ ಲಡಾಯಿ ಆಗೂತನ ನೋಡಿ ಸಂಪೂರ್ಣ ।
ಅಲ್ಲಿಂದ ಬಿಟ್ಟ ಪ್ರಾಣಾ ॥
ಭೀಷ್ಮನ ತಗೊಂಡು ಮೂರು ಲೋಕ ತಿರುಗಿ ಜಾಗ ವೈನಾ ।
ಇಲ್ಲಂದ ಭಗವಾನ ॥

ಕೈಯೊಳಗ ಕಿಚ್ಚ ಕೊಟ್ಟಾ ದೇವರ–
ನೋಡಿಕೇರಿ ಭಕ್ತಿ । ಭಕ್ತಿ ಆವನ ಭಕ್ತಿ ॥
ಭೀಷ್ಮ ಪರ್ವ ಮುಗಿಸಿ ದೇಹ ಇಟ್ಟ–
ಆಗಿಹೋದ ಮುಕ್ತಿ । ಮುಕ್ತಿ ಆಗಿ ಮುಕ್ತಿ ॥
ನಾಗನಾಥಗ ಒಲ್ತ ದೊಡ್ಡಾಕಿ–
ಹಾಳ ನಮ್ಮ ಶಕ್ತಿ । ಶಕ್ತಿ ನಮ್ಮ ಶಕ್ತಿ ॥

ಸೋಮವಾರ ದಿನಾ ಪದಾ ಮುಗೀತ ಹಲಸಂಗ್ಯಾಗ–
ಹಾಡತಾರ ಒಳೆ ಮೋಜಿಲೀ।
ಗುಡುಬಾಳು ಹೇಳಿದಾರ ಇದರ ಕೀಲಿ ।
**ಸಿದ್ರಾ ಶಿವಲಿಂಗ** ಹಾಡ್ಯಾರ ನೌಕೀಲಿ ।
ಪಾಂಡುಪ್ರತಾಪದಾಗ ಆದ ಕೌತುಕಾ–
ಎಷ್ಟಂತ ನಾ ವರ್ಣಿಸಲಿ ।
ಒಂದು ಬಾಯೀಲಿ ॥

# ಕರೀ ಹುಡಿಗಿ

೧ ನೆಯ ಚೌಕ—

ನೀ ಬಾರ ಕರ್‍ರ್ಯಾಸ ಕರಿ ಹುಡಿಗಿ ।
ಕರೀ ಸೀರಿ ಉಡಗಿ । ನವಿಲಿನಾಂಗ ನಡಿಗಿ ।
ನಡುತೆ ನವನಾ ।
ಕರಿಕೂದಲ ಬೇತಲ ತೀಡಿ ತೆಗೆದೆ ಸಣ್ಣಾ ।
ಕರಿ ಹುಬ್ಬ ಕೊರೆದಂಗ ಕರಿಕಾಡಿಗಿಗಣ್ಣಾ ।
ಏನು ಹೇಳಲಿ ನಾರಿ ನಿನ್ನ ಕಪ್ಪ ।
ಎಂಥ ನಿನ್ನ ರೂಪ । ಆಯಿತs ನೆಪ್ಪ ।
ನೀಲದ್ದುಣ್ಣಾ ॥

ಕರಿ ಹಣಚಿ ಬಟ್ಟಿನಾ ಖಲಿ ।
ಗಲ್ಲದ ಮ್ಯಾಲ ಬಾಲಿ । ಹಲ್ಲಿಗಿ ಜಾಚೇಲಿ ।
ಹಚ್ಚೀದಿ ತುಂಬಾ ।
ಕರಿ ಕರಮಣಿ ಕೊರಳಾಗ ಒಪ್ಪತಾವ ರಂಭಾ ।
ವ್ಯೆನೆರೆದೆ ಉಚ್ಚಿದ್ಧಾಂಗ ಕರಿಮಾವಿನ ತುಂಬಾ ।
ಕರಿಗೋಟ ಕೈಯಾಗ ಬಳಿ ।
ಚಿಕ್ಕ ಪ್ರಾಯು ಎಳಿ । ನಿನ್ನ ಈ ಬೆಳಿ ।
ಕರಿ ಬಾಳಿಯು ಬಂಬಾ ॥

ನೀ ಬಾರ ಕರ್‍ರ್ಯಾಸ ಕರಿ ಸ್ವಾಗಿ ।
ಆಯ್ತು ತಗಜೀಗಿ । ಹೋಗತೇ ನಾಗಿ ।
ಹಾಯ್ದು ಇಂಬಾ—।
ಗಣಿ ಹೂಡಿ ಮಿಣಿಯು ವ್ಯಾಗ ನಡೆದಂಗಾಯ್ತು ಡೊಂಬಾ
ಏನ ಸುದ್ದ ತೋಳತೊಡಿ ಕರಿಕಾಜಿನ ಕಂಬಾ ।
ನಂದವೇರಿಸಿ ಹೊಂಟಂಗ ಗೂಳಿ ।

ಕರಿಯು ಗಂಡೆರಳಿ । ಖಂಡೋಬಸ ಮುರಳಿ ।
ಕುಚಾ ಕುಂಭಾ ॥

ಯಾರ್‍ಯಾರು ಇಲ್ಲ ನಿನ್ನ ಸರಿ ।
ಸೃಷ್ಟಿಯೊಳು ಥೊರಿ । ಕಂಡಾಂಗ ಎರಿ ।
ನೆಲಿಯು ಗುಂಬಾ ।
ಮುಂಚ ಮಥನ ಮಾಡುವಾಗ ಹುಟ್ಟಿಸಿದಾನ ಸಾಂಬಾ ।
ಕರಿಕತ್ತಲಿ ರೂಪಕ ಅನಿಸಿದೆ ಜಗದಂಬಾ ।
ನಿನ್ನ ಕಂಡು ಹಾರಿತು ನನ್ನ ಹರಣಾ ।
ತುಸು ಇಲ್ಲ ಕರುಣಾ । ಕರೀ ನೀಲವರಣಾ ।
ನಿಂದು ಜಂಬಾ ॥

ಕರಿ ಚಂದ್ರಕಾಳಿ ಉಟ್ಟಿಸೀರಿ ।
ಕುಬಸ ಪುಟಿದೊರಿ ।
ನಿಂತ ಹೌಹಾರಿ । ನೋಡಿ ನಿನ್ನ ಡೌಲಾ ॥
ನಿನ್ನ ಮೂಗ ಕಾಡಿಗಿ ತೆನಿ ।
ಹೆಣ್ಣಾ ನಾಗೀಣಿ ।
ಸಣ್ಣಸ್ವರ–ಧನೀ । ಕರಿಯ ಕೋಗಿಲಾ ॥
ನಿನ್ನ ಕಂಡು ಮರೆತೆ ನನ್ನ ಮನೀ ।
ಮಾತನಾಡ ಜಾಣೀ ।
ಕರಿಯ ಮದ್ದಾನಿ । ಎರಿದಾಂಗ ಅಮಲಾ ॥

ಕರಿ ಕುತನಿಯಂಥ ಕಾಮಿನಿ ।
ಕಾರೆಳ್ಳದ ಗೊನಿ । ದೃಷ್ಟಿಯ ಮಣಿ ।
ಇದ್ದಂಗ ವರಣಾ ।
ಭಾಳ ಕಷ್ಟದಿಂದ ಶಿವ ಹುಟ್ಟಿಸಿ ನಿನ್ನ ಬಣ್ಣಾ ।
ಕರಿ ಹುಬ್ಬ ಕೊರದಂಗ ಕರಿಕಾಡಿಗಿ ಕಣ್ಣಾ ।
ಏನು ಹೇಳಲಿ ನಾರಿ ನಿನ್ನ ಕಪ್ಪ ।

ಎಂಥ ನಿನ್ನ ರೂಪ । ಆಯಿತss ನೆಪ್ಪ
ನೀಲದ್ಹಣ್ಣಾ ॥

೨ನೆಯ ಚೌಕ:—

ಕರಿ ರೂಪಕ ಕಿಗ್ಗಳ ಮಾಡಿ ।
ಅಡ್ಡಿ ಯಾಸಿದೀಡಿ । ನಿಸಗ ಏನು ಧಾಡಿ ।
ತಿಳಿಯೋಣಿಲ್ಲಾ ।
ನನ್ನ ಕರಿಯು ರೂಪ ಹೆಚ್ಚಾಡ ಸುಳ್ಳ ಅಲ್ಲಾ ।
ನಿನ್ನ ಕೆಂಪ ರೂಪ ಯಾತಕ ಬರೂದಿಲ್ಲಾ ।
ನಿನ್ನ ರೂಪಿಂಧ್ಹೇಳತೆನಿ ಝಾಡಿ ।
ಉತ್ರ ಮಾಡಿ ತೋಡಿ । ಹೌದು ಅಲ್ಲ ನೋಡಿ ।
ಮಾಡೊ ಕಬುಲಾ ॥

ರಣದಾಗ ನನ್ನ ಸಾಮುರ್ಥ ।
ಹೇಳತಿನಿ ಗುರ್ತ । ಕರಿಯು ಮುದ್ದು ತುರ್ತ ।
ಆದ ವಿಃಗಿಲಾ ।
ಗುಂಡ್ಹಾಕಿ ಹೊಡೆದರ ದಂಡ ಅಡವಿ ಪಾಲಾ ।
ಕರಿ ಕಬ್ಬಿಣ ಹೊಡೆತಕ ಒಡೆದುಹೋಯ್ತು ಕಲ್ಲಾ ।
ನನ್ನಿಂದೆ ಅಪ ಹತಿಯಾರ ।
ಕಾಳಮ್ಮನವತಾರ । ತುಬಾಕಿ ಬಂಧೂರ ।
ಕತ್ತಿ ಧಾಲಾ ॥

ನನ ಕಂಡು ತೆರೆದನೋ ಬಾಯಿ ।
ರಾವಣ ಕಿಸಬಾಯಿ । ನಾನೆ ಇದಿ ಮಾಯಿ ।
ಹೋಗಿದ ಮೊದಲಾ ।
ನಾ ಹೋದ ಬಳಿಕ ಹಿಂದಿಂದ ಬಂತೊ ಬಾಲಾ ।
ರಾವಣನ ಸಂಪತಿ ಮಾಡುದಕಳಿಗಾಲಾ ।
ಕರಿ ಹಣಮು ಹಾನ ಮುರಡೊಂಕಿ ।

ಹಾರಿದಾಲಂಕಿ । ಹಚ್ಚಿ ಅಂಪ ಜೆಂಕಿ ।
ಸುಟ್ಟ ಎಲ್ಲಾ ॥

ಕೆಂಪ ಕೋತಿ ಯಂಥ ಜೋಕ್ಮಾರ ।
ಮೆರೆದ ಬಲ್ಹಾರ ।
ಕರಿಯು ಹೊಲ್ಯಾತಾರ । ಹೊಡೆದ ಅವನ ಪ್ರಾಣಾ ॥

ಕೀಚಕ ನೋಡಿ ದ್ರೌಪದೀ ಕಳಿ ।
ಕೂಡೆನಂದ ಒಳಿ ।
ಕರಿಯು ಭೀಮು ಸೀಳಿ । ಒಗೆದ ಅವನ ಹೆಣಾ ॥

ಕರಿ ಪರಿಮುಳಿ ಹೆಣ್ಣು ಪರವಾತಾರ ।
ಆಕಿಯು ಸಾಮರ್ಥ ।
ಫಾಲ್ಗುಣ ಪಾರ್ಥ । ಯುದ್ಧ ಮಾಡಿಕೊಟ್ಟ ಬಂದ ಬಿಲ್ಬಾಣಾ ॥

ಆದಿ ಬುನಾದಿ ನನ್ನ ಕತ್ತಲಿ ।
ಓಂಕಾರದಲ್ಲಿ । ರೂಪ ಸಂದು ಅಲ್ಲಿ ।
ಇತ್ತ ಖೂನಾ ।
ಮುಂದ ಸೃಷ್ಟಿಮಾಡಿ ಭಾರ ತಾಳಿ ಚೌದಾಭುವನಾ ।
ಸೂರ್ಯ ಚಂದ್ರ ಬೆಳಕ ನನ್ನಿಂದ ಆಯ್ತು ಮುನ್ನಾ ।
ಏನು ಹೇಳಲಿ ನಾರಿ ನಿನ್ನ ಕಪ್ಪ ।
ಎಂಥ ನಿನ್ನ ರೂಪ । ಆಯಿತ ನೆಪ್ಪ ।
ಸೀಲದ್ಹಣ್ಣಾ ॥

೩ ನೆಯ ಚೌಕ:—

ಕರಿ ರೂಪಿಂದ್ಹೇಳ್ತಿ ಒಡಿವಾರ ।
ಮಾಡಿ ಬಲ್ಹಾರ । ಹೇಳತಿ ಸ ಪೂರ ।
ಮಾಡಿ ಖುಲ್ಲಾ ॥

ಮುಂಚ ಸಬಂದ ಬೆಳಕ ಸುವರ್ಣ ಇತ್ತ ಮೊದಲ ।
ನಿಜವಸ್ತು ನಿರ್ವಿಕಾರ ಮಾಡಿದಾಸ ಅಮಲಾ ।

ಅವಗ ಇಚ್ಛೆ ಬಂತು ಮನಸದಲ್ಲಿ ।
ಆಯಿತ ಕತ್ತಲಿ । ಮಾಯದ ಮಾಲಿ ।
ಬಿತ್ತು ಜಾಲಾ ॥

ಖೋಲ್ಯಾಗ ಒಯ್ದು ಕತ್ತಲಿ ।
ಇಟ್ಟ ಜ್ಯಾಕಿಲಿ । ಹಾಕಿದಾ ಕೀಲಿ ।
ಸುತ್ತ ಎಲ್ಲಾ ।
ಏಳು ಲಕ್ಷ ವರ್ಷ ಆದಕ ಕೈದ್ಯಾಗಿಟ್ಟನಲ್ಲಾ ।
ಮುಂಚ ಮಥನ ಮಾಡಿದವನ ಮೈಮೆಗಿ ಅಳತಿಲ್ಲಾ ।
ಆಕಿ ಕೈದಿ ಬಿಟ್ಟಿದಾ ಪುನಃ ।
ಸೂರ್ಯ ಚಂದ್ರ ದಿನಾ । ಎರಡು ಮಾಡಿ ಸವನಾ ।
ರಾತ್ರಿ ಹಗಲಾ ॥

ಕರಿ ಮದ್ದಿಂದು ಹೇಳತೆ ಒಡಿವಾರ ।
ಮಾಡಿ ಒಳೆ ಭಾರ । ಹೇಳತಿನಿ ಸಾರ ।
ತೆಗೆದು ಅಕಲಾ ।
ನನ್ನ ಕೆಂಪ ಗಂಧಕ ಒಳಗ ಕೂಡ್ಯಾದ ಮಿಗಿಲಾ ।
ಕೆಂಪ ಬೆಂಕಿ ಹಚ್ಚಿದರ ಮದ್ದ ಹಾರುದ ಮುಗಿಲಾ ।
ಅಗ್ನಿ ನಾರಾಯಣಾಸ ಸಾಮರ್ಥ ।
ಕೆಂಪರೂಪ ತುರ್ತ । ಸುಟ್ಟು ಆದಿ ಭರತ ।
ಆಗ ಕಬಲಾ ॥

ಮಾರುತಿಮು ಹೇಳತಿನಿ ಉತ್ರ ।
ವಾಯುಸುತ ಪುತ್ರ ।
ಸಾಂಬನವತಾರ । ಕೆಂಪರೂಪ ನೇಮಾ ॥

ಬೆಂಕಿ ಹಚ್ಚಿದ ಲಂಕಾಕ ಹಾರಿ ।
ಕೆಂಪ ಅಗ್ನಿ ಉರಿ ।
ಜಳಾ ಪತ್ತಿ ಮಾರಿ । ಕಪ್ಪ ಆಯ್ತು ಚರ್ಮಾ ॥

ನಿನಗ ಹೇಳತೀನಿ ದೃಷ್ಟಾಂತ ।
ಆತ್ಮನ ಗುರ್ತ ।
ವಾದ ಹಾಕಿ ವ್ಯರ್ಥ । ಆದ ನಿನ್ನ ಜನ್ಮಾ ॥

ಕೆಂಪ ರೂಪಿನದೆಷ್ಟು ಐಸಿರಿ ।
ಪ್ರಭು ಹಾನ ಧೊರಿ । ಅಲ್ಲ ಅವನ ಸರಿ ।
ನಿನ್ನ ಬಣ್ಣಾ ।
ಅವನ ಬೆಳಕಿನಲ್ಲಿ ತಿರುಗಾಡಿ ಉಣುದು ಜನಾ ।
ನಿನ್ನ ಕತ್ತಲಿಯೊಳಗ ಉಪವಾಸ ಪರಿಪೂರ್ಣಾ ।
ಏನು ಹೇಳಲಿ ನಾರಿ ನಿನ್ನ ಕಷ್ಟ ।
ಎಂಥ ನಿನ್ನ ರೂಪ । ಆಯಿತS ನೆಪ್ಪ ।
ನೀಲದ್ವರ್ಣಾ ॥

೪ನೆಯ ಚೌಕ:—

ನಿನ್ನ ಸಾಂಬಂದು ಹೇಳ್ತಿ ಸಾಮರ್ಥ ।
ಯಾವ ದೊಡ್ಡ ಪಾರ್ಥ । ಸಾರ್ತಿ ಅವನ ವಾರ್ತಾ ।
ನನ್ನ ಮುಂದಾ ।
ಕರಿ ಭಿಲ್ಲಣಿಗಿಯಾಕ ಬೆನ್ನ ಹತ್ತಿದ ಹಿಂದ ಹಿಂದ ।
ಕರಿ ಡೊಂಬತಿ ಕಾಲಾಗ ಟೊಣ್ಣಿ ಏಟ ತಿಂದ ।
ಕರಿ ವಿಷಾ ನುಂಗಿ ಶಂಕರಾ ।
ಧಗಿಯೆ ಬಿತ್ತು ಜೋರಾ । ತಲಿಯ ಮ್ಯಾಲ ಪೂರ ।
ಗಂಗಿ ಹೌದ ॥

ಸಮುದರಳ ಮಾಡಿದಾ ಮಥನ ।
ಚೌದಾ ಹೊಂಟು ರತನ । ವಿಷಾ ಒಂದು ಜತನ ।
ತೆಗೆದಾ ಹಿರದ ।
ಯಾರೀಗಿ ದಕ್ಕಾಂಗಿದ್ದಿತಿಲ್ಲ ತಾನೆ ತಿಂದಾ ।
ವಿಷದುರಪ ಬಿದ್ದು, ಜಡಿಯೊಳಗ ಗಂಗಿನ ತಂದಾ ।

ಕರಿ ಸೀರಿಂದ್ಹೇಳ ಬ್ಯಾಡ ದವ್ವಾ |
ಆಗಲಿಲ್ಲ ಕವ್ವ | ಶಬ್ದ ಅಂದ ರಾಮು |
ಶಾಂತವಾದಾ ||

ಇಬ್ಬರದು ನಡಿತ ಹಿಂಗೆ ವಾದ |
ಸಾಂಬ ಕೇಳಿsದ | ಸಿಟ್ಟೇಗಿ ಒಂದ |
ಕ್ರೋಧದಿಂದ |
ಯುಮನರಿಗಿ ಹೇಳಿದಾನ ಜೀವತರ್‍ರ್ಯ ಸಂದ |
ಯುವು ಹೋಗಿ ಜಗ್ಗಿ ತನ್ನ ಜೀವ ಎಳೆದು ಒಯ್ದ |
ಬೆಳಕ್ಹಾರಿ ಹೋಯಿುತು ಅಂತರಲಿ |
ಜತ್ತ ಕತ್ತಲಿ | ಗುರುಪಿನ ಕೀಲಿ |
ತಿಳಿಯದು ಸಂಧಾ ||

ಈ ದೇಹವೆಂಬುದು ಪೆಣ್ಣ |
ಆಗುದು ಮಣ್ಣ | ಗಂಡ ಜೀವ ಬಣ್ಣ |
ಒಳಗ ಇರುದಾ |
ಜೀವ ಕಡಿಗಿ ಆದ ವ್ಯಾಲ ದೇಹ ಕತ್ತಲಿಗೊಯ್ದಾ |
ಬೆಳಕ್ಹಾರಿ ಆಕಾಶದ ಕಡಿ |
ಒಳಗಿನ ಕುಡಿ | ಹೋಯ್ತು ಇನ್ನ ಹಿಡಿ
ಹಾರಿ ಜಿಗಿದಾ ||

ಈ ಜ್ಯೋತಿ ಚಿರಂಜೀವ ಇರುದ |
ದೇಹ ಸಾವೂದ |
ಹಾಕಬೇಡ ವಾದ | ನೆನಿಯು ಪರಮಾತ್ಮ ||
ಗುರು ಹರದಾಸ ಪ್ರಸನ್ನ |
ವಸ್ತ್ರಾದನ ತಾನ |
ಸಂಗೂ ರಾಯಪನ | ಜ್ಞಾನದಲಿ ಪ್ರೇಮು ||
ಇರೂ ಠಿಕಾಣಿ ಹಲಸಂಗಿ ಗ್ರಾಮು |

ಕತ್ತಲ್ಯಾಯ್ತು ಕಮ್ಮ ।
ಬೆಳಕ ಚಂದ್ರಾಮ । ತುರಾಯಿ ಹಚ್ಚಿ ಜೋಮಾ ॥

ಸರ್ವ ಜನಕ ಮಾಡತಿನಿ ಶರಣ ।
ಇರಲಿ ಅಂತಃಕರಣ । ಗುರುವಿನ ಚರಣ ।
ಹಿಡಿದು ಸವನಾ ।

**ಖಾಜಾಸ** ಕವಿಯು ನೋಡಿರಿ ಮುಡಿದಂಗ ದವನಾ ।
ಈ ಜೀವ ದೇಹಕ ಲಾವಣಿ ಮಾಡಿ ರತನಾ ।
ಏನು ಹೇಳಲಿ ನಾರಿ ನಿನ್ನ ಕಪ್ಪ ।
ಎಂಥ ನಿನ್ನ ರೂಪ । ಆಯಿತ್ಸ ನೆಪ್ಪ ।
ನೀಲದ್ವರ್ಣಾ ॥

---

# ನಿನ್ನ ಹೊರತು ದೇವರೇ ಇಲ್ಲ

೧

ಸೋಽಹಂ ಶಿವನೇ ನಿನ್ನ ಹೊರತು ದೇವರೇ ಇಲ್ಲ ॥

ನಿನ್ನ ಬಿಟ್ಟು ಯಾವ ದೇವರು ಇಲ್ಲ ।
ಕಲ್ಲಮಣ್ಣು ಕಟಿಗೀವೇ ಎಲ್ಲಾ ।
ಜನನ ಮರಣ ನಿನಗೆರಡೂ ಇಲ್ಲ ।
ತಾಯಿ ತಂದಿ ನಿನಗ್ಯಾರ್ಯಾರಿಲ್ಲ ।
ನಿನಗ ಯಾರೂ ಹಡವದಿಲ್ಲ ।

ಕಲ್ಲ ಇರುವದು ಮಡ್ಡ್ಯಾಗ ।
ಕಲ್ಲದೇವರ ಹುಟ್ಟೋದು ಒಡ್ಡರ ತಿಮ್ಮಯ್ಯನ ಕಯ್ಯಾಗ ।
ತಾಮ್ರ ಹಿತ್ತಾಳಿ ದೇವರಾ ಹುಟ್ಟುವದು ಪತ್ತಾರನ ಮನಿಯಾಗ
ಕಟ್ಟಿಗಿ ದೇವರ ಹುಟ್ಟುವದು ಬಡಿಗ್ಯಾನ ಕಯ್ಯಾಗ ।
ಮಣ್ಣದೇವರ ಹುಟ್ಟುವದು ಕುಂಬಾರ ಗುಂಡಯ್ಯನ ಮನಿಯಾಗ ।

ಇಂಥ ದೇವರ ಶಿಗುವದಿಲ್ಲ ।
ಈ ಮಂದಿಗಿ ತಿಳಿಯುವದಿಲ್ಲ ।
ಸುಳ್ಳಿ ಆಗತಾರ ಖರ್ಚಿಗಿ ಮೂಲ ।
ದೇವರಂಬವಾ ಒಬ್ಬ ಪಾಸ ಮ್ಯಾಲ ।
ಅವನ ಹೊರತು ದೇವರೇ ಇಲ್ಲ ।

ಸೋಽಹಂ ಶಿವನೇ ನಿನ್ನ ಹೊರತು ದೇವರೇ ಇಲ್ಲ ॥

೨

ಕಲಬುರ್ಗಿ ಕಲ್ಯಾಣ ಹಂಪಿ ಹದರಿಯ ಪೀರಾ ।
ಹುಲಜೆಂತಿ ಉಮರ್ಜಿ ಸೊಲ್ಲಾಪುರ ಸಿದ್ರಾಮೇಶ್ವರಾ ।
ಇವರು ದೇವರೇ ಅಲ್ಲ ! ಇವರು ಹಾರೊ
ಮಾನೂಮನಸ್ಯಾರಾ ।
ದುಡಕೊಂಡು ದುಡಕೊಂಡು ಇವರು ಆಗ್ಯಾರ
ದೊಡ್ಡ ದೊಡ್ಡ ಶರಣರಾ ।

ಸಾವು ಹೊತ್ತಿಗೆ ಯಾವ ದೇವರಿಲ್ಲ ।
ಏನು ಮಾಡತಾವ ಗುಡಿಯಾನ ಕಲ್ಲ ।
ಕೊರಳಿಗೆ ಕೊರಳಾ ಬಿದ್ದು ಅಳತಾವ ಎಲ್ಲಾ ।
ಅಲ್ಲಾನ ಹೊರತು ಒಗಿ ಹರಿಯುವದಿಲ್ಲಾ
ಅವನ ಹೊರತು ದೇವರೇ ಇಲ್ಲ ।
ಸೋಹಂ ಶಿವನೇ ನಿನ್ನ ಹೊರತು ದೇವರೇ ಇಲ್ಲ ॥

೩

ಸೃಷ್ಟಿಯೊಳು ಶ್ರೇಷ್ಠಾಗಿ ಮೆರೆವುದಾ ।
ಈ ಕರ್ನಾಟಕದಾಗ ಹಲಸಂಗಿ ಈಶನ ಬಿರದಾ ।
ಈ ಅಂತರಂಗದ ಗುರುಮಾರ್ಗ ಅವನೇ ತಿಳಿಸಿದಾ ।
ಶಿಶ್ಯಾರ ಜೋಡಿ ರಾಮಚಂದ್ರ ಮೌಲಾ ।
ಕವಿ **ಖಾಜಾ** ಹೀಂಗ ಹೇಳಿದ ಅಕಲಾ ।
ಎಷ್ಟು ಹೇಳಲಿ ನನ್ನ ಗುರುವಿನ ಲೀಲಾ ।
ಹಲಸಂಗಿ ಈಶಾ ತಾನೇ ಬಲ್ಲಾ ।
ಸೋಹಂ ಶಿವನೇ ನಿನ್ನ ಹೊರತು ದೇವರೇ ಇಲ್ಲ ।

# ಕಠಿನ ಶಬ್ದಾರ್ಥಗಳು

ಪುಟ

೧ ಸೀತಾಳ – ಪವಿತ್ರಜಲ

,, ಅಬಿರ – ಬುಕ್ಕಿಟ್ಟು

ನಿಂತ – ನಿಂತೆನು

೨ ಸುರತ – ಸೌಂದರ್ಯವತಿ

ಥೆರಿ – ತೆರೆ, ಅಲೆ

ರಂಬಿ – ರಂಭೆ

ಒದುತೆ – ಒದೆಯುತ್ತ

ನಿಲಗಿ – ನಿರಿಗೆ

ಭವಳೀಕಿ – ಮೂರ್ಛೆ

ಒದರಿ – ಕೂಗಿ

ಬತ್ತೀಸ – ಮೂವತ್ತೆರಡು

೩ ಚವಣಕ್ಕಿ – ಚಾಣಕ್ಕಿ, ಮೈನಾ.

ಧಾಕಿ – ಗಾಬರಿಗೊಂಡು

ತಾಡಿ – ಸಮಾನ

ಸುರತ – ಸ್ಮೃತಿ

ಅರತ – ಅರಿತು

ಬಂದ – ಬಂದೆನು

ಖಬರ – ಎಚ್ಚರ

ಪಾತರದಾಕಿ – ಸೂಳೆ

೪ ಖಾಸ – ನಿಜವಾಗಿ

ಅಬರು – ಮಾನ

ಸುರಗಿ – ಸೌಭಾಗ್ಯ

ಹರಲಿ – ಅಪವಾದ, ನಿಂದೆ

೫ ಆರ್‍ಯಾಣ – ಅರಣ್ಯ

ಕುಸಲ – ಸೂಳ್ಳು

೬ ಶಿಕಲ – ರಹಸ್ಯ

ಪುಟ

ಹೇಳ್ತ ಝೂಡಿ – ಅನುಮಾನ ವಿಲ್ಲದೆ ಹೇಳುತ್ತೇನೆ

ಪತಿವ್ರತಾ – ಪಾತಿವ್ರತ್ಯ

ಅಂಚ – ಸೀಮೆ

ಉಪರಾಟಿ – ತಿರುವುಮುರುವು

ಮೋಲ – ಮೂಲ್ಯ, ಬೆಲೆ

ತಿನಸಬೇಡ ಗೊತ್ತಿ – ಲಾಗ ಹೊಡೆಸಬೇಡ, ಪೀಡಿಸಬೇಡ

ಜುತ್ತ – ಜತೆ, ಜೋಡು

೭ ಬೋಬಾಟ – ಗಲಾಟೆ

ತುರ್ತ – ಸದ್ಯಕ್ಕೆ

ಬರತ – ಬರುತ್ತೇನೆ

ಝೂಡಿ – ತಟ್ಟು

ಬೆರತ – ಬೆರೆತೆನು

ಅಸ್ತೂರಿ – ಸ್ತ್ರೀ

'ಕಲ್ಗಿ' ಮತ್ತು 'ತುರಾಯಿ' – ಅನುಕ್ರಮವಾಗಿ 'ಹೆಣ್ಣು' ಮತ್ತು 'ಗಂಡು' ಮೇಲು ಮಾಡಿ ಹಾಡುವ ಲಾವಣಿಯಲ್ಲಿನ ಪಕ್ಷಗಳು

೮ ಕುತ್ತ – ಕುಳಿತೆನು

ಆದ – ಆದೆನು

ತೂರ – ತುರಾಯಿ (ಗೆದ್ದ ಲಾವಣಿಕಾರರು ತುಂತುಣಿಗೆ ತುರಾಯಿ ಕಟ್ಟಿ ಮೆರೆಸುವರು)

ಮಲಿಕ ವೈತರ – ಊರ ಮುಸಲಮಾನರ ದೇವರು (ದೇವರ ತುರಾಯಿ ಮೆರೆಯುತ್ತವೆ ಎಂದರ್ಥ)

ಪುಟ

ಹಚ್ಚಿ ವರಿಗಿ – ಒರೆಗೆ ಹಚ್ಚಿ

೯ ಹಂತಿಲೆ – ಹತ್ತರ

ಹಾಂನ – ಅಹನು, ಇದ್ದಾನೆ

೧೦ ನಜರ – ದೃಷ್ಟಿ

ಮುಡದಾರ – ವ್ರಾತ್ಯ, ಅಸಂಸ್ಕೃತ

೧೧ ಆದ – ಅದೆ, ಇರುತ್ತದೆ

ಖಲಿ – ಕಲಿ

೧೨ ಖ್ಯಾಲ – ಮನಸ್ಸು

ಬೇಲಾಸಕ್ಕ – ಬೇಲಾಶಕ್, ಅನುಮಾನವಿಲ್ಲದೆ

ಮ್ಹಾಲಕ – ಮಹಾಲಿಗೆ, ಮಂದಿರಕ್ಕೆ

೧೩ ಆಲಪರೆವು – ಆಲ್ಪರಿದು, ಹಾತೊರೆದು

ಚಾಲವರೆದು – ದುಂಬಾಲಬಿದ್ದು, ಗಂಟುಬಿದ್ದು

ದರಕಾರ – ಎಗ್ಗು, ಪರಿವೆ

ಬಿನ್ ಘೋರ – ನಿರ್ಭಯವಾಗಿ

ಫಂಟ – ಸುಳ್ಳು

೧೪ ಹೊಣಾರ – (ಮರಾಠಿ) ಆಗಲಿರುವದು

ಅಂದಾರ – ಅಂಧಕಾರ, ಕತ್ತಲೆ

ಅಡಾಡಿಮಾಡಿ – ಗಡಿಬಿಡಿ ಮಾಡಿ

ಘಾಸೀ – ಮೋಸ

ತೆಕಳ್ಹಿದು – ತೆಕ್ಕೆ(ತಕ್ಕೆ) ಹಾಯ್ದು

೨೧ ಗಿಡಮಂಜು – ದಟ್ಟವಾದ ಗಿಡಗಳ ಗುಂಪು

ಪುಟ

ದರಜು – ದರಕಾರ

೨೩ ನೆಗಿಯಾಣಿ – ನಗೆವೆಣ್ಣು, ನೆಗೆಣ್ಣು, ಓರಗಿತ್ತಿ

೨೪ ತೋಡ – ಪ್ರತಿಯುಕ್ತಿ

೨೫ ಹಿಡಿದುಕೇರಿ – ಹಿಡಿದು

೨೭ ಮಸ್ಕರಿ – ಚೇಷ್ಟೆ, ವಿನೋದ

೨೮ ಘುಗಡಿ – ಇಬ್ಬರು ಕೈ ಕೈ ಹಿಡಿದು ಸುತ್ತ ತಿರುಗುವ ಒಂದು ಆಟ

ಛತ್ತೀಸ – ಮೂವತ್ತಾರು

೨೯ ಬಾವನ್ನ – ಐವತ್ತೆರಡು

ಸೇಲ – ಮೇಲು

ನಾಯ್ಕಣಿ – ನಾಯಕಸಾನಿ, ಕಲಾವಂತಿನ

೩೦ ಜಕಣ್ಯಾರು – ಜಕ್ಕಿಣಿಯರು, ಯಕ್ಷಿಣಿಯರು

ಪದ್ಮಿ – ಪದ್ಮಿನಿ

ಬಿಂದ್ರಬನ – ವೃಂದಾವನ

೩೨ ಕಂಬಿ – ಮಣಿಸಿದ ಸಲಾಕಿ

ಅಮಲ – ದರ್ಪ

ತಿಗ – ನಿತಂಬ

ಹೊಯ್ಲ – ಅಚ್ಚು (Mould)

ದಂಗವರದು – ದಂಗು ಬಡಿದು, ಬೆಪ್ಪಾಗಿ

ಮಜಲ – ಐಟು

ಬೆರತ – ಬೆರೆತನು

ಮರಳ – ಮರೆತನು

ಪುಟ

೩೩ ಭಾರಿನಾಗ – ಭಾರಿನೊಳಗೆ, (ಮರಾಠಿ–ಬಹಾರ) ಯೌವನದ ಭರದಲ್ಲಿ

ಪೊರದಿ – ದೊರೆತಿ

ಜಿಂದಗಿ – ಆಸ್ತಿ

ಯಾಸಿದೀಡಿ – ಕೊಂಕುಮಾತು

ಕರದ – ಕರೆದೆನು

೩೪ ಖಾನಖೂನ – ಗುರುತು

ಸೋಟ – ಲಫಂಗ, ತುಂಟ

ಗ್ನಾಳಿ – (ಮರಾಠಿ-ಗೋಳಾ) ಕೂಡಿಹಾಕಿ, ಮುದ್ದೆ ಮಾಡಿ

ಬೈಮಾನ – ಬೆ ಇಮಾನ, ವಿಶ್ವಾಸಘಾತುಕ

ವರ್ಮ – ವೈರ

ಶರ್ಮ – ನಾಚಿಕೆ

೩೫ ಧಮಕ – ಬೆದರಿಕೆ

ಧಾಕ – ,,

ಮಾಡಸಂದಿ – ಮಾಡಿಸು ಅಂದೆ

ಮುರಕ – ಒಯ್ಯಾರ

೩೬ ಹಾಳ - ಇದ್ವಾಳಿ

ಫಂದ – ಜಂಭ

ದಿನತಾನ – ದಿನಗಳ ತನಕ

ಹಿರಸ – ಈರ್ಷೆ

ತುರಸ - ಸ್ಪರ್ಧೆಯು, ಜಗಳದ ಮಾತು

೩೭ ಬರತ - ಬರುತ್ತೇನೆ

೩೮ ಅಗ್ರ – ಮೂಲ, ಆತಂಕ

ಧಗಿ – ಕಿಚ್ಚು

ಹುಗಳಿ – ಹುಗಿದು

ಪುಟ

ಝುಟ್ಟಾ – ಕೆಲಸ

ಲಗಟಾ - ಬೇಗ

೩೯ ಇರೂತನ – ಇರುವ ತನಕ

೪೦ ಸೂರ – ಶ್ರುತಿ

೪೨ ಕೋರಿ ಹರಕರು – ತೀರ ಬಡವರು

೪೩ ವೈನಿಲ್ಲ - ಚೆನ್ನಾಗಿಲ್ಲ, ಪ್ರಶಸ್ತವಾಗಿಲ್ಲ

ಕುಲಾಬಿ ವಂಕಿ – ತೊಟ್ಟಿಲ ಕೊಂಡಿ

ಕೊಟ್ಟೇದ – ಕೊಟ್ಟಿದ್ದೇನೆ

೪೪ ಧೀರೇ – ತಡ

ಅಗಟಗಿ – ಅಗ್ಗಿಟಗೆ, ಅಗ್ಗಿಷ್ಟಿಕೆ

೪೫ ಸನಮುತ್ತ – ಸಮ್ಮತ, ತೃಪ್ತಿ

೪೮ ಇರಟ್ಟಿಗಾಗಿ – ಇರುವಷ್ಟರಲ್ಲಿ

ಹಂಡ - ಹುಂಡಬಂಡ, ಚಿಕ್ಕೆ ಚಿಕ್ಕೆಯುಳ್ಳ

ಡಪಳಾ – ಚೌಕುಳಿ

ತೀಡಕ್ಕಿ - ತೀಡುವಾಕೆ

ತುದಿಗಟ್ಟಿ – ಕಟ್ಟೆಯ ತುದಿಗೆ

ಕೆರವತ್ತಕಾಟ - ಗರಗಸದಂಚಿನದು

೫೧ ನೂಸಿ ಹಸುವತಾವರೆ- ನೋಯಿಸಿ ಹರಿಯುತ್ತವೆ

೫೪ ಬಾಳಿ ಬಸಿ - ಹೆಸರುಗಳು

೫೬ ನಕರಿ - ಮುರಕ

ಗಚ್ಚಿ - ಗಟ್ಟಿಯಾಗಿ

ಹಗರಣ – ಹೈರಾಣ, ಗಾಸಿ

ಪುಟ

ಖೊಳಾವು – (ಮರಾಠಿ-
ಖೋಳಾಂಬಾ) ಅಡಿ
೫೮ ಖಾಮಾಖಾವು - ಖಂಡಿತವಾಗಿ
ಸೋರಿ - ಗಡಿಗೆ
ಪಿಕ್ಕಾ – ಕಳಿಗುಂದಿದವಳು
ಹೋಳಬಿದ್ದು – ಅಡ್ಡದಾರಿ
ಹಿಡಿದು, ತಪ್ಪಿಸಿ
೬೧ ಬಾಜುಬಂದ – ತೋಳಿನ
ಆಭರಣ ವಿಶೇಷ
ಜರಾ – ತುಸು ಕೂಡ
೬೨ ಕವಿ – ಕವಿತೆ
ಚಡ – (ಏರು) ಮೇಲು
೬೩ ಮೈತರು – ಮಿತ್ರ
ಹೆಂಡಿ – ಸಗಣಿ, ಲಂಚ
ಕೆಮಾನಝುಟ್ಟ – ಕ್ರಾಪು
೬೪ ಸಲ್ಲ – ಸೊಲ್ಲು
ಬೊಲ್ಬಲಾ – ಬಾಯ್ಬಡಕತನ
೬೬ ಕಾರಿಪಟ್ಟಿ – ಕೊರಳೊಳಗಿನ
ಒಂದು ಆಭರಣ
ಸುರತ – ಸೌಂದರ್ಯ
ಸೋಕೆ – ಸ್ವಲ್ಪ, ಕೊಂಚ
೬೮ ಮರಸೋಟಾ – ಹೆಚ್ಚಿನ ಲಫಂಗ
ಹೊಂಡ – ಹೊರಡು
ಪರಕಾರಾದ – ಒಂದು ಪ್ರಕಾರ
ವಾಗಿದೆ
೬೯ ಧಸಕೆ – ಹೆದರಿಕೆ
ಶರಾಸೂರಿಮಾಡಿದ – ಸೂರೆ ಮಾ
ಡಿದ

ಪುಟ

೭೦ ಸಂವ ಮೊಳ – ಒಂದೂಕಾಲು
(ಎಂದರೆ ಹಿರಿದಾದ ಭಾಗ್ಯ
ಎಂದರ್ಥ)
ಮರದ – ಮರ್ದ, ಗಂಡಸು
ಭಾರಗಿ – ಬರಿಗೆ (ಕಸಪೊರಿಕೆ)
ಉಬಿ – (ಉಭೇ) ಇಡಿ
೭೪ ಪೈಲಿಪ್ರಥಮದಾಗ – ಮೊಟ್ಟ
ಮೊದಲು
ನಿರತಾ – ನೇರವಾಗಿ, ನಿರಿ ಹಿಡಿದು
೭೫ ಭೇಟಿ – ಕಿತ್ತೊಗೆದು
ಶಪಾ – ಶಪಥ
೭೬ ಖಡತರ – ಹಟದ, ದೃಢವಾದ
ಟಿಕಾಶ್ಯಾ – ತಾಳುವನು
ಧುರಪ – ಸರತಿ
೭೭ ಆಯ್ತು ಖಪ್ಪ – ಕರಗಿ
ಹೋಯಿತು
ಗೋತಾಸಿ – ಸಿಕ್ಕಿಬಿದ್ದು
ಜವ್ಮಾ – ಜಮಾಯಿಸಿ, ಕೂಡಿ
ಕೊಂಡು
೭೮ ವರವ್ಮಾ, ಹೊಲವ್ಮಾ – ಗುಟ್ಟು
ಯಶ ಕುಡುತ – ಯಶವನ್ನು
ಕೊಡುತ್ತೇನೆ
೭೯ ಲೋಡು – ದಿಂಬು
ತಿಗಟಿ – ಕವಲು ಕಟ್ಟುವದು
೮೦ ಕೈಯೊಳಗ ಕಿಚ್ಚ ಕೊಟ್ಟ – ಕೈಯು
ಲ್ಲಿಯೇ ದಹನ ಮಾಡಿದನು
೮೧ ನಡುತೆ – ನಡೆಯುತ್ತಿ
ಹಣಚಿ ಬಟ್ಟು – ಹಚ್ಚೆ
ಜಾಚೇಲಿ – ಹಲ್ಲಿಟ್ಟು